# ಪ್ರಸ್ತಾವನೆ.

ಐದು ಭೂಕಂಪಗಳಲ್ಲಿ ಅಳಿಯದೆ ಉಳಿದರೆ, ಆರನೆಯ ಕಂಪನವನ್ನು, ಹೆಂಡತಿಯ ನಿತ್ಯದ ಸಿಡುಕಿನ ಚಿಕ್ಕ ತುಫಾನಿನಂತೆ ಅಲಕ್ಷ್ಯಭಾವದಿಂದ ಕಾಣಲು ಸಿದ್ಧನಿರುವ ನಾನು, ನಿಮ್ಮನ್ನು ಹಾಗೆಯೇ ಸಹಾನುಭೂತಿಯ ದೃಷ್ಟಿಯಿಂದ ಕಂಡು—ಹಲವು ಬಗೆಯ ಅಥವಾ ಜಾತಿಯ ಕತೆಗಳನ್ನೋದಿ, "ಕತೆ"ಯೆಂದು ಬರುವ ಏನನ್ನೂ ಓದಲು ಸಂತೋಷದಿಂದ ತ್ರಿಕರಣಗಳನ್ನೂ ಒಪ್ಪಿಸಿರುವ ಆತ್ಮತ್ಯಾಗಿಗಳಿಗಾಗಿ ಈ "ಹುಚ್ಚು ಕತೆ"ಗಳನ್ನು ಬರೆವೆನು. ಓದಿದರೆ, ಪುಣ್ಯವಿಲ್ಲದಿದ್ದರೂ ಪಾಪವಿರದು. ಪುಣ್ಯವಿಲ್ಲದುದೇ ಪಾಪವಾದರೆ, ಆ ಪಾಪವು ದೊಡ್ಡದಿರದೆಂಬ ಸಮಾಧಾನ ವಾಕ್ಯನ್ನು ಇಲ್ಲಿ ಅಗತ್ಯವಾಗಿ ಹೇಳುವೆನು.

"ಕತೆ"ಗಳು ನಿಜವಾಗಿಯೂ ಕತೆಗಳೇ ಎಂದು ನಾನು ಅನೇಕ ಬಾರಿ ಆಶ್ಚರ್ಯಪಟ್ಟುದಿದೆ. ನಾನು ಬರೆದ ಕತೆಗಳನ್ನು ನಾನೇ ಓದುತ್ತ ನನ್ನ ಹೊರತು ಇನ್ನಾರಾದರೂ ಇವುಗಳನ್ನೋದಿರಬಹುದೇ? ಎಂದು ಆಶ್ಚರ್ಯಪಡುತ್ತ—ಒಂದು ಸುಳ್ಳನ್ನು ಹೇಳಿದರೆ ಮುಂದೆ ಯಮನು ಕೊಡುವ ಶಿಕ್ಷೆಯ ಮೊತ್ತವನ್ನು ಗರುಡಪುರಾಣದ ಅಳತೆಯಿಂದ ಅಳೆದು. ಅಸಂಖ್ಯ ಸುಳ್ಳುಗಳನ್ನು ನಿತ್ಯವೂ ಹೇಳಿದ, ಹೇಳುತ್ತಿರುವ ನನಗೆ ಯಮನ ಪಿನಲ್‌ಕೋಡು ಸಾಕಾದೀತೇ ಎಂದೂ ಆಶ್ಚರ್ಯಪಟ್ಟುದಿದೆ. ಆದರೆ ಎಷ್ಟೋ ಬಾರಿ ಸುಳ್ಳು ಹೇಳುವುದನ್ನು ಬಿಟ್ಟೇಬಿಡಬೇಕೆಂದು ಠರಾವು ಮಾಡಿ, ಆ ಠರಾವನ್ನು ಜ್ಯಾರಿಗೆ ತರಬಾರದೆಂದು ಕೆಲವೇ ಗಂಟೆಗಳಲ್ಲಿ ಎರಡನೇ ಠರಾವು ಮಾಡಿದುದೂ ಇದೆ. ಸುಳ್ಳೆಂಬುದು ಕೈಹಿಡಿದ ಹೆಂಡತಿಯಂತೆ. ಕೆಲವರು ಅರಿತೂ, ಕೆಲವರು ಅರಿಯದೆಯೂ ವರಿಸುವರು. ಕೆಟ್ಟುದೆಂದು ಬಿಟ್ಟವರು, ಸುಖಿಸುವುದಿದೆ; ಚಂಚಲಮನಸ್ಕರಾದರೆ ದುಃಖಿಸುವರು. ಬಿಡಲಾಗದುದೇ ಧರ್ಮವೆಂದು ನೆನೆದು, ಮೌನವಾಗಿ ಸಹಿಸಿರುವವರೂ ಇರುವರು. "ಕತೆ"ಗಳೆಂಬುವು ಒಂದು ಜಾತಿಯ ಸುಳ್ಳಿನ ಸರಗಳು. ಬರೆವವನು ಬರೆದೇ ಹೋಗುವನು, ಓದುವವನು ಓದಿಯೇ ಹೋಗುತ್ತ, ಸುಖಿಸಿಯೋ ದುಃಖಿಸಿಯೋ ಎರಡೂ ಇಲ್ಲದೆ ಕಲ್ಲಿನಂತಾಗಿಯೋ ಕಾಲಕಳೆವನು. ಓದದವನು .....ಆತನನ್ನೀಗ ನೀವು ಚೆನ್ನಾಗಿ ಪರೀಕ್ಷಿಸಬೇಕಾಗಿದೆ.

ಸುಳ್ಳನ್ನು ಬರೆಯಬಾರದೆಂಬ ಅದೊಂದು ಒಳ್ಳೆ ಕ್ಷಣದಲ್ಲಿ "ಜೀವನದ ಸೊಗಸು" ಲೇಖನಿಯಿಂದ ಹರಿಯಿತು. ಆ ಕಲ್ಪನೆಯು ಕೆಲವು ಕ್ಷಣ ನನ್ನನ್ನು ಆನಂದಿತನನ್ನಾಗಿ ಮಾಡಿ ಹುರಿದುಂಬಿಸಿತು. ಪ್ರೇರಣೆಯು ಮಾಯವಾಗುವುದರೊಳಗೆ, ಎರಡೇ ದಿನಗಳಲ್ಲಿ ಹದಿನೆಂಟು "ಕತೆ"ಗಳನ್ನೂ ಬರೆದು, (ನನ್ನನ್ನೇ ನಾನು ಹೊಗಳಿಕೊಳ್ಳುವ ಮಹತ್ವದ ಪಂಕ್ತಿಗಳಿವು!) ನನ್ನದನ್ನು ನಾನೇ ವಿಮರ್ಶಿಸಲಾರದೆ, ಸತ್ಯವು ಬೆಳಕೆಂಬ ವಿಶ್ವಾಸದಿಂದ ಈ "ಸತ್ಯಕಥೆ"ಗಳನ್ನು, ಟೀಕಾಕಾರರ ತಿರಸ್ಕಾರದ ಚರ್ಯೆಯ ಭಯಂಕರ ರೂಪವು ಮನಸ್ಸಿಗೆ ಬಾರದೆ, ಪ್ರಕಟಿಸುವ ಧೈರ್ಯವುಳ್ಳ ಸಂಪಾದಕರಿಗೆ ಒಪ್ಪಿಸಿಯೂ ಆಯಿತು. ಇದ್ದುದ್ದನ್ನು ಇದ್ದ ಹಾಗೆಯೇ ನುಡಿದರೆ "ಅಸಭ್ಯ"—"ಅಸಹ್ಯ"—"ಆಭಾಸ"ವೆನ್ನುವ ನಾಗರೀಕ ಪ್ರಪಂಚದಲ್ಲಿ ಈ ಕತೆಗಳಿಗೆ ಸ್ಥಾನವಿದೆಯೋ ಎಂಬುವದನ್ನು ಆಲೋಚಿಸಲಿಲ್ಲ. ಈಗ.....ಈಗ ಅಚ್ಚಾಗಿ ಹೋದ ಅವುಗಳನ್ನೇನೋ (ಆ ಕತೆಗಳನ್ನು) ನೀವು ತಿದ್ದಲಾರಿರಿ. ಬದಲಿಗೆ, ಶಿರೋನಾಮೆಯನ್ನೆ "ಜೀವನದ ಕುರೂಪತನ"ವೆಂದು ತಿದ್ದಿದರೆ,—ಈ ತಿದ್ದುಪಾಟು ಒಪ್ಪಿಗೆಯಾದೀತೇ? ಎಂದು ನೋಡಬಹುದು.

"ಹುಚ್ಚು ಕತೆಗಳು" ತದ್ವಿರುದ್ಧ ಮನೋಭಾವದ ಫಲಗಳು. ಇದರಲ್ಲಿ ಒಂದಕ್ಷರವೂ ಸುಳ್ಳಿಲ್ಲದುದಿಲ್ಲ. ಈ ಕತೆಗಳಲ್ಲಿ ಬರುವ ಸುಳ್ಳಿಗಿಂತ ಮಹತ್ತರವಾದ ಸುಳ್ಳನ್ನು ನೀವು ಎಲ್ಲಿಯೂ ಓದಿರಲಾರಿರಿ ಎಂದು ಭರವಸೆಯಿಂದ ಹೇಳುವೆನು. ಸುಳ್ಳುಗಳಲ್ಲಿದು "ಗೌರಿಶಂಕರ" ಶಿಖರ (ಅಥವಾ ಆ ಶಿಖರಕ್ಕಿಂತಲೂ ಎತ್ತರವಾದ ಶಿಖರವು ಇನ್ನು ಮುಂದೆ ಕಂಡು ಹಿಡಿಯಲ್ಪಟ್ಟರೆ, ಇಲ್ಲವೇ ಭೂಕಂಪದಿಂದ ಉಂಟಾದರೆ—ಆ ಶಿಖರ—). ಈ ಶಿಖರಕ್ಕೇರ ಬೇಕಾದರೂ ನಿಮಗೆ ಆಮ್ಲಜನಕ ತುಂಬಿದ ಚೀಲಗಳು ಖಂಡಿತವಾಗಿ ಬೇಕು. ಮುಂದೆ ಹೋದಂತೆ "ಸ್ಟವ್" ಕೂಡ ಉರಿಯದಂತಹ ಚಳಿಯಾಗಬಹುದು; ಬೆನ್ನು ನೋಯಬಹುದು; ಓಕರಿಕೆಯಾಗಬಹುದು. ಆದರೂ, ಎದೆಗೆಡದೆ, ಸ್ಥೈರ್ಯವನ್ನು ತೊಲಗದೆ ಹಟದಿಂದ ಮುಂದುವರಿಯುವಿರಾದರೆ, ನೀವು ಇದನ್ನು ಜಯಿಸುವಿರಿ.

ಈ ನಡುವೆ ಒಂದು ನಿರ್ಮಲವಾದ (ಆದರೆ, ಬಹುಶಃ ನಿಮಗೆ ಅಗತ್ಯವಿಲ್ಲದ) ಮಾತು. ಶ್ರೀ। ಎಮ್. ಎನ್. ಕಾಮತರವರು ನನ್ನ ಗುರುಗಳು ಹಾಗೆಂದು, ಅವರು ಎಲ್ಲ ಗುರುಗಳಂತೆ ನನ್ನ ಬಳಿ ನಿಂತು, ನನಗೆ ಬರೆಯಲು ಕಲಿಸಿದುದಿಲ್ಲ ತಂತಿರಹಿತ ಧ್ವನಿವಾಹಕಸಾಧನ(wireless)ದಂತೆ ಆತ್ಮಗಳು ಪರಸ್ಪರ ಸಂಭಾಷಿಸುತ್ತವೆಯೆಂದು ಕೇಳಿದ್ದೇನೆ. ಹಾಗೆ ನಾನು ಶ್ರೀ। ಕಾಮತರವರಿಂದ ಶಿಕ್ಷಣ ಪಡೆದಿರುವೆನು. ನಾನು ಪ್ರತಿಯೊಂದು ಕತೆಯನ್ನು ಬರೆವಾಗಲೂ ಅವರ ನೆನಹು ಉಂಟಾಗುವುದು. ಕತೆಯು ಮುಗಿಯುತ್ತಲೇ ನಾನದನ್ನು ಅವರಿಗೆ ತೋರಿಸುವ ಆತುರವುಳ್ಳವನಾಗಿದ್ದೆ. ಆದರೆ, ಅವರಿಗ ತೋರಿಸದೆ ಮುದ್ರಿಸಲ್ಪಟ್ಟ ಕತೆಗಳನ್ನವರು "ಒಳ್ಳೇದಲ್ಲ"ವೆಂದು ನಾಪಾಸು ಪಟ್ಟಿಯಲ್ಲಿ ಸೇರಿಸಿದುದನ್ನು ಕೇಳಿ, ಮುದ್ರಣದ ಮೊದಲೇ ಅವರ ಅಭಿಪ್ರಾಯವನ್ನು ಕೇಳಿದರೆ ಮುದ್ರಣದ ಸುಖವನ್ನಾ ಕತೆಯು ಕಾಣದೆ ಹೋದೀತೆಂಬ ಭಯದಿಂದ,—ಮುದ್ರಣವಾದ ನಂತರವೇ ಅವರೆದುರಿಗೆ ಅದು ಬೀಳುವ ಹಾಗೆ ಎಚ್ಚರದಿಂದಿದ್ದೇನೆ. ಇದು, ಇಷ್ಟು,—ನನ್ನ "ಗುರು ಭಕ್ತಿ". (ಇದನ್ನು ಅವರ ಅಪ್ಪಣೆ ಪಡೆಯದೆ ಬರೆದುದಕ್ಕೆ ಕ್ಷಮೆ ಬೇಡುವೆನು.)

ಸಣ್ಣ ಕತೆಗಳಿಗೆ ಆಚಾರ್ಯರಿದ್ದಾರೆಂದು ಕೇಳಿದ್ದೇನೆ. ಆದರೆ, ಅವರನ್ನು ನಾನು ನೋಡಿದುದಿಲ್ಲ; ಅವರ ಕತೆಗಳನ್ನೋದಿರುವುದೂ ಇಲ್ಲ. ಇದು ಜಂಭದ ಮಾತೆಂದು ಭಾವಿಸಬಾರದು. ಸುಳ್ಳು ಸುಳ್ಳು ಕತೆಗಳನ್ನು ಬರೆವೆನಾದರೂ ಪ್ರಸ್ತಾವನೆಯನ್ನೂ ಸುಳ್ಳು ಬರೆಯಲಾರೆ, ಅವುಗಳ (ಆಚಾರ್ಯರ ಕತೆಗಳ) ಉತ್ಕೃಷ್ಟತೆಗೆ ಮನಸೋತು, ಅನುಕರಣೆಯ ಚಟವು ನನಗೆ ಅರಿವಿಲ್ಲದೆನೇ ಬಂದು ಬಿಟ್ಟೀತೆಂಬ ಭಯದಿಂದ ನಾನವುಗಳನ್ನು ಓದುತ್ತಿಲ್ಲ. ನನ್ನಲ್ಲಿ ನನಗೆ ಅಷ್ಟು ವಿಶ್ವಾಸ!

ನಮ್ಮ ನಾಡು ದೊಡ್ಡದು; ನುಡಿಯು ಸಣ್ಣದಲ್ಲ; ವಿಷಯಗಳು ಅಸಂಖ್ಯಾಕ. ಓದುಗರು ಮಾತ್ರ ಇದಕ್ಕೆ ತಕ್ಕಂತೆ ದೊರೆತರೆ ಶಾಯಿಯೂ ಲೇಖನಿಯೂ ಕಾಗದವೂ ತುಂಬ ದೊರೆವುದೆಂದು ಮುದ್ರಕರು ಭರವಸೆ ಕೊಡುತ್ತಾರೆ. ಇವೆಲ್ಲವೂ ದೊರೆವಾಗ ಮುದ್ರಕರೂ ಆಳಿಂಬೆಗಳಂತೆ ದೊರೆವರೆಂದು ಮುದ್ರಕರಿಗೆ ನಾನೂ ಗರ್ವದಿಂದ ಹೇಳಬಲ್ಲೆ. ಆದರೆ, ಒಂದಕ್ಕೊಂದು ಸರಿಯಾಗಿ ದೊರೆತು, ಮುದ್ರಕರು ಮುದ್ರಿಸಿಕೊಟ್ಟುದನ್ನು ಕೊಂಡುಕೊಂಡು ಓದುವವರು ಮಾತ್ರ ಕಾಲನ್ನು ಹಿಂತೆಗೆದರೆ, ಆಳಿಂಬೆಗಳಂತೆ ದೊರೆವ ಮುದ್ರಕರ ಕತ್ತು ಅದರಷ್ಟೆ ಸುಲಭವಾಗಿ ಮುರಿದು ಹೋದೀತೆಂಬ ಎಚ್ಚರಿಕೆಯ ಮಾತನ್ನಿಲ್ಲಿ ಹೇಳಿ—ಅಂತಹ ಕೊಲೆಗೆ ಪಾಲುಗಾರರಾಗಬಾರದೆಂಬ ಸದ್ಬೋಧೆಯಿಂದ ಈ ಹುಚ್ಚು ಪ್ರಸ್ತಾವನೆಯನ್ನಿಲ್ಲಿ ಮುಗಿಸಿ, "ಹುಚ್ಚು ಕತೆ"ಗಳನ್ನಾರಂಭಿಸುವ—

—ಕುಡ್ಪಿ ವಾಸುದೇವ ಶೆಣೈ

# ಹುಚ್ಚು ಕತೆಗಳು

## ೧. ಅರಸರ ನೆಗಡಿ.

ಶ್ರೀ ಶ್ರೀ ಶಕಟ ಪುರಾಧೀಶ ಸುಂದರವರ್ಮನು ಅಂತಃಪುರದಲ್ಲಿ, ಮೂವತ್ತು ತಲೆಗಿಂಬುಗಳ ನಡುವೆ ಶಯನಿಸಿ, ಕಣ್ಣುಗಳನ್ನು ಅರ್ಧ ತೆರೆದಿಟ್ಟು ನೋಡುತಿದ್ದನು. ಅಂತಃಪುರವು ಅನಂತಪುರವಾಗಿ ನಲ್ವತ್ತು ಜನರಿಂದ ತುಂಬಿತ್ತು. ಆ ನಲ್ವತ್ತು ಜನರಲ್ಲಿ ಮೂವತ್ತು ಜನರು, ತಲಾವೊಂದರಂತೆ ತಲೆಗಿಂಬನ್ನು ತಂದು ಅರಸನ ಸುತ್ತುಮುತ್ತಲೂ ಇಟ್ಟು 'ಸುಖವಾಯಿತೇ ಪ್ರಭೋ?' ಎಂದು ಅಖಂಡವ್ಯಸನದ ಚರ್ಯೆಯಿಂದ ಪ್ರಶ್ನಿಸುತಿದ್ದರು. ಉಳಿದ ಹತ್ತು ಜನರು ಹತ್ತು ಕಂಬಳಿಗಳನ್ನು ತಂದು ಅರಸನಿಗೆ ಹೊದ್ದು,— 'ಚಳಿ ಹೋಯಿತೇ ಪ್ರಭೋ?' ಎಂದು ಆತುರದಿಂದ ಪ್ರಶ್ನಿಸುತಿದ್ದರು. ಕೊಠಡಿಯಲ್ಲಿ ದೀಪಗಳು, ಹಗಲೆಂಬುದನ್ನು ಮರೆತು ಉರಿದು,—'ಊರಿಗೆ ಅರಸನಾದರೆ ತಾಯಿಗೆ ಮಗ' ಎಂಬ ಗಾವೆಗೊಂದು ತಮ್ಮನನ್ನು—'ಅರಸನಿಗೆ ನೆಗಡಿಯಾದರೆ ನಮಗೂ ಆಗಬೇಕೇ?' ಎಂಬ ಪ್ರಶ್ನೆಯಿಂದ ಕೂಡಿಸಿಕೊಟ್ಟವೋ ಎಂಬಂತೆ, ಎಣ್ಣೆಗೆ ದಾರಿದ್ರ್ಯವಿಲ್ಲದ ಆ ಅರಮನೆಯ ಎಣ್ಣೆಯನ್ನು ಹಗಲಿನಲ್ಲಿಯೂ ಚೆನ್ನಾಗಿ ಕುಡಿದು, ಮತ್ತವಾಗಿ ಪ್ರಕಾಶಿಸುತಿದ್ದುವು. ಹೊರಗೆ ಹನಿಯುವ ಮಳೆಯ ಶಬ್ದದ ಹೊರತು, ರಾಜನ ಕೊಠಡಿಯಲ್ಲೆಲ್ಲ ಮರಣದ ಮನೆಯಂತೆ ಮೌನ!

ಫಕ್ಕನೆ ಆ ಮೌನವನ್ನು ಭೇದಿಸಿ ಒಂದು ನಿಟ್ಟುಸಿರು ಹೊರಡಿತು. ನಲ್ವತ್ತು ಜನರ ಕತ್ತುಗಳೂ ಅರಸನ ಕಡೆಗೆ ಒಂದಡಿ ಬಾಗಿದುವು. 'ವೆಂಕಟೇಶ ವರ್ಮಾ!'

ಕೇಳಿದವನು ಅರಸನೇ! ಮುಖ್ಯ ಪ್ರಧಾನ ವೆಂಕಟೇಶ ವರ್ಮನು ಮತ್ತೊಂದು ಅಡಿ ಬಾಗುತ್ತ, 'ಜೀಯಾ!' ಎಂದನು.

'ವರ್ಮಾ, ನೋಡು, ನನಗೆ ನಿಜವಾಗಿಯೂ ಏನಾಗಿದೆ?'

'ನೆಗಡಿ, ಮಹಾಪ್ರಭೋ! ಕೇವಲ ನೆಗಡಿ!'

'ನೆಗಡಿ! ನೆಗಡಿ!!...ನೆಗಡಿಯಾದರೆ ಮೂಗಿನಿಂದ ಸಿಂಬಳ ಹರಿಯುವುದೇ ವೆಂಕಟೇಶ ವರ್ಮಾ?'

'ಜೀಯಾ, ನೆಗಡಿಯೆಂದರೆ ಸಿಂಬಳ, ಸಿಂಬಳವೆಂದರೆ ನೆಗಡಿ!'

'ಅಕೋ ವರ್ಮಾ, ಬಂತೇ ಬಂತು!”

ನಲ್ವತ್ತು ಜನರೂ ದಡಮ್ಮನೆ ಬಾಗಿದರು. ಎಂಭತ್ತು ಕೈಗಳು ಅರಸನ ಮೂಗಿಗೆ ಮುಟ್ಟಲು ಯತ್ನಿಸಿದುವು. ಅರಸನ ಗಲ್ಲ, ಮೀಸೆ, ತುಟಿ, ಮೂಗು ಇವೆಲ್ಲವೂ ಚಿಮುಟಲ್ಪಟ್ಟವು. ವೇದನೆಯನ್ನು ಸಹಿಸಲಾರದೆಯೂ ಪ್ರಾಣಭಯದಿಂದಲೂ ಅರಸನು ಹೃದಯಭೇದಕವಾದ ಆರ್ತನಾದವನ್ನು ಮಾಡಿದನು. ಎಂಭತ್ತು ಕೈಗಳೂ ಸರಕ್ಕನೆ ಹಿಂದೆಗೆಯಲ್ಪಟ್ಟುವು. ಅರಸನ ಮೂಗು, ತುಟಿ ಮತ್ತು ಗಲ್ಲಗಳು ಕಾಮನ ಬಿಲ್ಲಿನ ವರ್ಣದಿಂದ ರಂಜಿಸುತಿದ್ದುವು. ಮೀಸೆಗಳ ಪುಂಜದಿಂದ ಅರೆವಾಸಿ ಬೆಳೆ ಕಟಾವಾಗಿತ್ತು!

'ವರ್ಮಾ!'

'ಪ್ರಭೋ!'

'ಸಿಂಬಳ ತೆಗೆವುದೆಂದರೆ ಹೀಗೇನು ವರ್ಮಾ? ನನಗೆ ಬಹಳ-ಬಹಳ ನೋವಾಯಿತು ವರ್ಮಾ!'

'ಉಪಾಯವಿಲ್ಲ ಪ್ರಭೋ!'

'ಅಲ್ಲ ವರ್ಮಾ; ಇನ್ನು ನನಗೆ ಸಿಂಬಳ ಬಂದರೆ ನಾನೇ ತೆಗೆಯಲಾಗದೆ?'

'ಆಗದು ಪ್ರಭೋ! ತಮ್ಮ ಮೈ ಅದರುವ ಯಾವ ಚಲನವೂ ಇರಬಾರದೆಂದು ವೈದ್ಯರು ಹೇಳಿದ್ದಾರೆ!'

ಅರಸನು ಮತ್ತೊಂದು ನಿಟ್ಟುಸಿರು ಬಿಟ್ಟನು. ಆ ನಿಟ್ಟುಸಿರು ಆ ದಿನಕ್ಕೆ 700ನೇ ನಿಟ್ಟುಸಿರು!

'ವರ್ಮಾ!'

'ಜೀ ಪ್ರಭೋ!'

'ಆ ನೀಲವರ್ಣದ ತಲೆಗಿಂಬು ಇದೆಯಲ್ಲಾ, ಅದಕ್ಕೂ ನೆಗಡಿಯಾಗಿದೆಯೋ ನೋಡು ವರ್ಮಾ! ಅದು ಹಾಗೆ ಗಟ್ಟಿಗಟ್ಟಿ ಇರುವುದಲ್ಲಾ!'

'ಪ್ರಭೋ! ಇಲ್ಲ. ತಲೆಗಿಂಬಿಗೆ ನೆಗಡಿಯಾಗುವುದಿಲ್ಲ!'

'ಅಯ್ಯೋ, ಎಷ್ಟು ಪುಣ್ಯವಂತ ವಸ್ತು ಆ ತಲೆಗಿಂಬು! ನಾನೂ ಒಂದು ತಲೆಗಿಂಬಾಗಿ, ಹೀಗೆ ನೆಗಡಿಯಿಂದ ಅರಸರ ಬಳಿಯಲ್ಲೊ ಕೆಳಗೋ ಸುಖವಾಗಿ ನಿದ್ರಿಸುತಿದ್ದೆ!!!'

'ಹಾಗೆನ್ನಲಾಗದು ಪ್ರಭೋ! ತಾವು ತಾವೇ, ತಲೆಗಿಂಬು ತಲೆಗಿಂಬೇ!'

'ವರ್ಮಾ, ಅದೂ ಸಿಂಹಾಸನದ ಮೇಲೆ ಕುಳಿತುಕೊಳ್ಳುವುದು, ನಾನೂ ಕುಳಿತುಕೊಳ್ಳುವೆನು! ಜನರು ನನಗೆ ಬಗ್ಗುವಾಗ ಅದಕ್ಕೂ ಬಗ್ಗುವರು!'

'ಆದರೆ, ಅದಕ್ಕೆ ತಮ್ಮಂತೆ ನಿರ್ಮಲವಾದ ಆತ್ಮವಿಲ್ಲ; ಆತ್ಮವೇ ಇಲ್ಲ ಪ್ರಭೋ!'

'ಆದುದರಿಂದ ನೆಗಡಿ ಯಾನೆ ಸಿಂಬಳವೂ ಇಲ್ಲ ವರ್ಮಾ!'

'ಅದು ನಾಲ್ಕಾರು ವರ್ಷದಲ್ಲಿ ಹರಿದುಹೋಗುವುದು ಪ್ರಭೋ! ತಾವು ಚಿರಕಾಲ ಬಾಳುವಿರಿ!'

'ವರ್ಮಾ!'

'ಪ್ರಭೋ?'

'ನೀನು ಏಕೆ ಸುಳ್ಳು ಹೇಳುವೆ? ನಾನು ಎಲ್ಲ ಮನುಷ್ಯರಂತೆ ಒಂದು ದಿನ ಸಾಯುವೆನಲ್ಲವೇ?'

'ಇಲ್ಲ ಪ್ರಭೋ! ತಾವು ಚಿರಂಜೀವಿಗಳು!'

'ಕೇಳು ವರ್ಮಾ! ನಾನು ಖಂಡಿತವಾಗಿಯೂ ಸಾಯುವೆನು. ಆ ತಲೆಗಿಂಬಿಗಿಂತ ಕೆಲಕಾಲ ಹೆಚ್ಚು ಜೀವಿಸಿ, ಸಾಯುವೆನು, ಅಷ್ಟೆ. ನನಗೂ ಆ ತಲೆಗಿಂಬಿಗೂ ಭೇದವೇನೂ ಇಲ್ಲ!'

'ತಾವು ಪ್ರಜೆಗಳನ್ನು ಆಳುತ್ತಿರುವಿರಿ ಪ್ರಭೋ!'

'ಅಯ್ಯೋ, ಸುಳ್ಳಿನ ಮೇಲೆ ಸುಳ್ಳನ್ನು ಹೇಳುವೆಯಲ್ಲಾ! ಆಳುವುದು ನಾನೇ? ನೀನೂ, ನಿನ್ನ ಸಹಮಂತ್ರಿಗಳೂ ಕೂಡಿ ಆಳುವಿರಲ್ಲಾ!'

'ತಮ್ಮ ಪರಿಪಕ್ವ ಜ್ಞಾನ್ಮೆಯ ಬೆಳಕು ನಮಗೆ ದಾರಿ ತೋರಿಸುವುದರಿಂದ-ಪ್ರಭೋ!'

'ನನ್ನ ಜ್ಞಾನ್ಮೆ!!! ನೆಗಡಿಯೆಂದರೆ ಏನೆಂದು ತಿಳಿಯದೆ ಅನುಭವಿಸುತ್ತಿರುವ ನಾನು ಜಾಣನೇ? ವರ್ಮಾ, ನಿಜವಾಗಿಯೂ ಹೇಳು— ನಾನು ಏತರಲ್ಲಿ ಪ್ರವೀಣನು?"

'ಓದಿನಲ್ಲಿ, ಬರೆಹದಲ್ಲಿ!'

'ಓದು ನನಗೆ ಬಂದರೂ ಓದಿದವನಲ್ಲ; ಬರೆಯಲಾಪೆನಾದರೂ, ನೀನು ತಂದ ಕಾಗದಗಳಿಗೆ ಸಹಿ ಹಾಕುವುದರ ಹೊರತು ಮತ್ತೇನೂ ಬರೆದವನಲ್ಲ!'

'ಆಟಗಳಲ್ಲಿ!'

'ರಾಣಿಯೊಡನೆ ಚದುರಂಗ ಆಡುವ ಹೊರತು ಮತ್ತಾವ ಆಟವನ್ನೂ ಆಡಿದವನಲ್ಲ!'

'ಸಂಭಾಷಣೆಯಲ್ಲಿ...?'

'ನೀನು ಹೇಳುವುದನ್ನೆಲ್ಲ ಒಪ್ಪಿದುದನ್ನು ಬಿಟ್ಟು ಬೇರೆ ಯಾವ ಸಂಭಾಷಣವೂ ಭಾಷಣವೂ ನನಗೆ ಬರುವುದಿಲ್ಲ!'

'ಪ್ರಭುಗಳು ಮನ್ನಿಸಬೇಕು. ಹೀಗೆ ಮಾತಾಡಿದರೆ ತಮಗೆ ಆಯಾಸವುಂಟಾಗಿ, ನೆಗಡಿಯು ವೈಪರೀತ್ಯಕ್ಕೆ ಹೋಗಬಹುದೆಂದು ವೈದ್ಯರು ಹೇಳಿದ್ದಾರೆ. ನಿದ್ರಿಸಬೇಕು.'

'ವೈದ್ಯರು— ವೈದ್ಯರು— ಮತ್ತು ನೆಗಡಿ!' ಎನ್ನುತ್ತ ಅರಸನು 701ನೇ ನಿಟ್ಟುಸಿರು ಬಿಟ್ಟು, ಕಣ್ಣುಮುಚ್ಚಿ ನಿದ್ದೆ ಹೋಗಲೆತ್ನಿಸಿದನು.

ಆದರೆ,— ನಿದ್ದೆ? ಮೂಗಿನಿಂದ ಸಿಂಬಳ, ಎದೆಯಲ್ಲಿ ಕಫ, ಮೈಯಲ್ಲಿ ನೋವು, ಚಿತ್ತದಲ್ಲಿ ಚಂಚಲತೆ,— ಇವಿಷ್ಟು ಇರುವಾಗ ನಿದ್ದೆ ಎಲ್ಲಿಂದ? ಕೆಲವು ನಿಮಿಷ ಕಣ್ಣುಮುಚ್ಚಿ ನಿದ್ದೆಹೋಗಲೆತ್ನಿಸುವಷ್ಟರಲ್ಲೆ ಸಿಂಬಳ ಬಂತು!

'ವರ್ಮಾ!'

'ಪ್ರಭೋ!'

'ಸಿಂಬಳ...!'

ನಲ್ವತ್ತು ಜೋಡು ಕೈಗಳು ಪುನಃ ಆ ರಾಜನಾಸಿಕವನ್ನೊಳೆದಾಡಿದುವು. ಕೋಟಿ ಸಿಡಿಲುಗಳ ಗರ್ಜನೆಯಿಂದ ಅರಸನು ಪುನಃ ಕಿರಚಿದನು. ಮೂಗನ್ನು ಸವರಿದರೆ ಮೈ ಅದುರಬಹುದೆಂಬ ಹೆದರಿಕೆಯಿಂದ ಆತ್ಮನೈವೇದ್ಯ ಮನೋಭಾವದಿಂದ 702ನೇ ನಿಟ್ಟುಸಿರು ಬಿಡುತ್ತ ಪುನಃ ವೆಂಕಟೇಶ ವರ್ಮನನ್ನು ಸಂಬೋಧಿಸಿದನು:—

'ವರ್ಮಾ!'

'ಜೀಯಾ!'

'ನನ್ನ ಮೂಗು ಅಲ್ಲೇ ಇದೆಯೋ ನೋಡು!'

'ಇದೆ ಪ್ರಭೋ!'

'ಹಂ! ಹೋಯಿತೆಂದೆಣಿಸಿದೆ!... ವರ್ಮಾ!'

'ಪ್ರಭೋ?'

'ಈ ಸಿಂಬಳವನ್ನೆಲ್ಲ ಒಂದೇ ಬಾರಿ ತೆಗೆಯಲಾರೆಯಾ?'

'ಅಸಾಧ್ಯ ಪ್ರಭೋ!'

'ಹಾಗಾದರೆ, ಅದನ್ನು ತೆಗೆಯದೆ ಇರಬಹುದಲ್ಲವೇ?'

'ಆಗದು ಪ್ರಭೋ! ಮೂಗಿನಿಂದ ತುಳುಕಿ ಬಂದು ತಮಗೆ ಅಸಹ್ಯವಾಗ ಬಹುದು!'

'ನಿಜ. ಹಾಗಾದರೆ, ಇನ್ನು ತೆಗೆ ವಾಗ 40 ಜನರೂ ತೆಗೆಯಬೇಡಿರಿ. ಸುಮಾರು 30 ಜನರು ತೆಗೆದರೆ ಸಾಕು!'

ಅರಸನಿಗೆ ಕೊಂಚ ಸಂತೋಷ ವಾಯಿತು. ನೆಗಡಿಯಾದಂದಿನಿಂದ ಅವ ನಿಗಾದ ಸಂತೋಷವೆಂದರೆ ಇದೀಗ ಈ ಕ್ಷಣ! ಆದರೆ, ಆ ಆನಂದವು ಹೆಚ್ಚು ಕಾಲ ಅನುಭವಿಸಲ್ಪಡಲಿಲ್ಲ. ಕೆಲವೇ ನಿಮಿಷಗಳಲ್ಲಿ ಅರಸನು ವರ್ಮನನ್ನು ಕರೆದು,— "ನನಗೆ ನೆಗಡಿಯಾಗಿದೆ ಯೆಂದು ಪ್ರಜೆಗಳಿಗೆ ಗೊತ್ತಿದೆಯೇ ವರ್ಮಾ?" ಎಂದು ಕೇಳಿದನು.

"ಪ್ರಜೆಗಳೆಲ್ಲ ಆತುರದಿಂದ ತಮ್ಮ ಆರೋಗ್ಯದ ಸ್ಥಿತಿಯನ್ನು ದಿವಾರಾತ್ರಿ ಅರಮನೆ ಹೊರಗೆ ನಿಂತು ಕೇಳುತ್ತಿರು ವರು ಪ್ರಭೋ!"

'ಅವರಿಗೆ ಯಾರು ಹೇಳುವರು?'

ಉತ್ತರವಾಗಿ, ಮಂತ್ರಿಯು, ಕಳೆ ದೆರಡು ದಿನಗಳಿಂದಲೂ ಪ್ರಕಟಿಸಿದ ಆರೋಗ್ಯ ಪತ್ರಕಗಳನ್ನು (Bulletins) ತರಿಸಿದನು. ಸುಮಾರು 1500 ತಾಂವು ಗಳ ದೊಡ್ಡ ಕಟ್ಟು!

ಅರಸನು ಕಣ್ಣುಗಳನ್ನರಳಿಸಿದನು. 'ವರ್ಮಾ, ಇದೆಲ್ಲ ಕಾಗದದ ಕಟ್ಟು ಏನು?'

'ಅದು ತಮ್ಮ ದೇಹಸ್ಥಿತಿಯನ್ನು ವರ್ಣಿಸಿ ನಿಮಿಷನಿಮಿಷಕ್ಕೂ ಪ್ರಕಟಿಸಿ, ಅರಮನೆ ಹೊರಗೆ ಹಚ್ಚುವ ಪ್ರಕಟಣಾ ಪತ್ರಗಳು ಪ್ರಭೋ!'

'ನನ್ನ ನೆಗಡಿ ಎಂದರೆ ಇಷ್ಟು ದೊ ಡ್ಡದೇ?' ಎಂದು ಒಂದೇ ಒಂದು ಪ್ರಶ್ನೆ ಯನ್ನು ಕೇಳಿ, ಅರಸನು ಮೂರ್ಛೆ ಹೋದನು!

ಅರಮನೆಯಲ್ಲೆಲ್ಲ ಕೋಲಾಹಲ! ಸುಮಾರು ಇನ್ನೂರು ವೈದ್ಯರು ಕರೆಸ ಲ್ಪಟ್ಟರು. ಆ ಇನ್ನೂರು ಮಂದಿಯೂ ಮದ್ದನ್ನರೆದು, ಅರಸನಿಗೆ ಒಂದೊಂದೇ ಚಮ್ಚ ಕುಡಿಸಿದರು. ನೂರು ಜನರು ಗಾಳಿ ಬೀಸಿದರು. ಎಪ್ಪತ್ತು ಮಂದಿ, ಸುಗ್ಗಾಟ ಮಾಡಿ ಕಾಲು ತಿಕ್ಕಿದರು. ಮತ್ತೆ ಐವತ್ತುಮಂದಿ ಅರಮನೆಯನ್ನೆಲ್ಲ ಅಡಿಮೇಲು ಮಾಡಿ ಐವತ್ತು ತಲೆಗಿಂಬು ಗಳನ್ನು ತಂದು ರಾಶಿಯೊಡ್ಡಿದರು. ಈ ಉತ್ಪಾತಗಳಿಂದ ಅರಸನು ಮೂರ್ಛೆ ತಿಳಿದು, ಕಣ್ಣುಬಿಟ್ಟನು. ಬಳಿಯ ವೈ

ದ್ಯರು ಪಿಸುಮಾತಿನಲ್ಲಿ, ಒಬ್ಬರಿನ್ನೊಬ್ಬರೊಡನೆ, 'ಇದು ನ್ಯುಮೋನಿಯ!' ಎಂದುದು ಆಗಲೇ ಅರಸನಿಗೆ ಕೇಳಿಸಿತು.

'ವರ್ಮಾ!'

ಆ ವೈದ್ಯರ, ಸೇವಕರ ಗುಂಪನ್ನು ಬಿಡಿಸಿ ವೆಂಕಟೇಶ ವರ್ಮನು ನುಸುಳಿ ಬಂದು,—'ಪ್ರಭೋ?' ಎಂದನು.

'ನ್ಯುಮೋನಿಯಾ ಎಂದರೇನು ವರ್ಮಾ?'

'ಶ್ವಾಸಕೋಶಗಳಿಗೆ ಚಳಿಹಿಡಿದು, ಬಾತುಕೊಳ್ಳುವುದು ಪ್ರಭೋ!'

'ಅದು ನೆಗಡಿಗಿಂತ ದೊಡ್ಡದೇ?'

'ನೆಗಡಿ ಬಲಿತೇ ಅದು ಉಂಟಾಗುವುದಾದರೂ, ನೆಗಡಿಗೂ ನ್ಯುಮೋನಿಯಕ್ಕೂ ಅವರೆಕಾಳಿಗೂ ವಿಂಧ್ಯಾಪರ್ವತಕ್ಕೂ ಇದ್ದಷ್ಟು ವ್ಯತ್ಯಾಸ ಪ್ರಭೋ!'

'ವರ್ಮಾ!'

"......!"

'ಇಷ್ಟು ದೊಡ್ಡ ರೋಗವು ನನಗೆ ನಿಜವಾಗಿಯೂ ಆಗಿದೆಯೇ?'

'ವೈದ್ಯರಿರುವಾಗ ಹೆದರಿಕೆ ಇಲ್ಲ ಪ್ರಭೋ!'

'ಆದರೆ, ವರ್ಮಾ! ನೆಗಡಿಯಿಂದ ನ್ಯುಮೋನಿಯವಾಯಿತು. ನ್ಯುಮೋನಿಯದಿಂದ ಮತ್ತೇನು ಬರುವುದೋ ಯಾರು ಹೇಳಬಲ್ಲ? ಆದುದರಿಂದ ನೆಗಡಿಯೂ ನ್ಯುಮೋನಿಯವೂ ಆ 'ಮತ್ತೊಂದೂ' ಇವು ಮೂರೂ ಒಂದೇ ಬಾರಿ ಹೋಗುವ ಹಾಗೆ, ಬಹಳ ಸವಿಯಾದ—ತಂಪಾದ ಸಿಹಿಯಾದ— ರುಚಿಕರವಾದ ಒಂದು ಚಿಕ್ಕ-ಬಲು ಚಿಕ್ಕ ಮಾತ್ರೆಯನ್ನು ತಂದುಕೊಡುವಂತೆ ನನ್ನ ವೈದ್ಯರಿಗೆ ಅಪ್ಪಣೆ ಮಾಡು, ವರ್ಮಾ!'

'ಅಪ್ಪಣೆ ಪ್ರಭೋ!'

'—ಮತ್ತು ವರ್ಮಾ! ನೆಗಡಿಯಾಗುತ್ತಲೇ ನೀನು ಹೊರಡಿಸಿದ ಪ್ರಕಟಣಾ ಪತ್ರಗಳ ಕಟ್ಟು ದೊಡ್ಡದಿತ್ತು. ಈಗ ಅದಕ್ಕಿಂತಲೂ ದೊಡ್ಡದಾದ—ಅಲ್ಲ, ವಿಂಧ್ಯಾಪರ್ವತದಷ್ಟು ದೊಡ್ಡದಾದ ನ್ಯುಮೋನಿಯ ಬಂದಿದೆ. ಈ ಪ್ರಕಟಣಾಪತ್ರಗಳ ಕಟ್ಟು ಎಷ್ಟು ದೊಡ್ಡದಾಯಿತೆಂದು ಒಮ್ಮೆ ನನಗೆ ತೋರಿಸು!'

ವೆಂಕಟೇಶವರ್ಮನು ಬಳಿಯಲ್ಲಿದ್ದ ಸೇವಕರಿಗೆ ಕಣ್ಣುಸನ್ನೆ ಮಾಡಿದನು. ನಿಮಿಷಾರ್ಧದಲ್ಲಿ ಇಪ್ಪತ್ತು ಸೇವಕರು ಎರಡೆರಡು ಮಣ ಭಾರದ ಕಾಗದದ ಕಟ್ಟುಗಳನ್ನು ಹಿಡಿದುಕೊಂಡು ಅರಸನ ಮುಂದೆ ಸಾಲಾಗಿ ನಿಂತರು!

ಅರಸನು ನೆಟ್ಟದೃಷ್ಟಿಯಿಂದ ಆ ಕಟ್ಟುಗಳನ್ನೆಲ್ಲ ನೋಡಿದನು. ಕಾಲು ತಾಸು ತನಕ ಮೌನವಾಗಿ ಶಿಲಾಪ್ರತಿಮೆಯಂತೆ ನೋಡಿದನು. ಆ ಮೇಲೆ ವರ್ಮನಿಗೆ ತನ್ನ ಬಳಿಗೆ ಬರುವಂತೆ ಸನ್ನೆ ಮಾಡಿದನು.

ವೆಂಕಟೇಶ ವರ್ಮನು ಅರಸನ ತಲೆ ಬಳಿ ಕುಳಿತು, ತಲೆಯನ್ನು ಬಾಗಿಸಿದನು. ಅರಸನು ಆತನನ್ನು ಮತ್ತಷ್ಟು ಬಳಿಗೆ ಬರುವಂತೆ ಸನ್ನೆಮಾಡಿ, ಕೊಂಚ ತಲೆಯೆತ್ತಿ ಕಷ್ಟದಿಂದ ಉಸಿರನ್ನು ತಡೆದು ತಡೆದು, ಪ್ರಯತ್ನಪೂರ್ವಕವಾಗಿ,—'ನನ್ನ ಪ್ರಜೆಗಳು ಇನ್ನು ಇಷ್ಟು ಪ್ರಕಟಣಾಪತ್ರಗಳನ್ನು ಓದಲಾರರು.

ನಾನು ಸತ್ತಿರುವೆನೆಂದು ಒಂದೇ ಒಂದು ಪತ್ರಕವನ್ನು ಬರೆಯಿಸಿ, ಎಲ್ಲಿಯಾದರೂ ಹಚ್ಚಿ ಬಿಡು!' ಎನ್ನುತ್ತಿರಲು— ಅರಸನ ತಲೆಯು ದೊಪ್ಪನೆ ತಲೆಗಿಂಬಿಗೆ ಬಿತ್ತು; ಕಣ್ಣುಗಳು ಮುಚ್ಚಿಕೊಂಡುವು; ಅರೆ ಬಿರಿದಿದ್ದ ತುಟಿಗಳು ಸಂದುಗೂಡಿ, ಶಾಂತಿಯ ಚರ್ಯೆಯು ತೋರಲು ಸಹಾಯಕವಾದುವು; ನೆಗಡಿಯ ಕಷ್ಟವನ್ನು ಸಹಿಸಲಾರದ ಆ ಪ್ರಾಣವು ಹಾರಿ ಹೋಯಿತು!



# ೨. ನಂಗಣ್ಣ—ಗ್ರಂಥಕಾರ

"ಇಡು ಹೆಜ್ಜೆ ನಡೆ ಮುಂದೆ...!" 'ನಾಣ್ಣುಡಿ' ಎಂಬ ವಿಷಯದಲ್ಲಿ ಸಂದೇಹವಿದೆಯೇ?

ಸುಳ್ಯದ ನಂಗಣ್ಣನು ಅದನ್ನು ಚೆನ್ನಾಗಿ ಬಲ್ಲನು. ಮೂರು ವರುಷಗಳ ಅವಿಶ್ರಾಂತ ಶ್ರಮದಿಂದ ಆತನಿಂದು ತನ್ನ ಮಹಾಗ್ರಂಥವೊಂದನ್ನು ಪೂರ್ಣಗೊಳಿಸಿದ್ದನು. ಅದು ಮುದ್ರಣದಲ್ಲಿ ಎಷ್ಟು ಪುಟಗಳಾಗಬಹುದೆಂದು ಅವನಿಗೇ ತಿಳಿಯದು. ಅದರಲ್ಲಿ ಇರುವುದೇನೆಂದು ಯಾರಾದರೂ ಕೇಳುವ ಬದಲಾಗಿ ಇಲ್ಲದುದೇನು ಎಂದು ತೋರಿಸಿಕೊಟ್ಟರೆ ಲಕ್ಷ ರೂಪಾಯಿಗೆ ಪಂಥ ಕಟ್ಟುವ ಚರ್ಯೆ ಆತನದು! ಇರುವೆಯಿಂದ ಮೊದಲಾಗಿ ಆನೆಯ ತನಕ ಎಲ್ಲವೂ ಅದರಲ್ಲಿತ್ತು. ಅದಕ್ಕೊಂದು ಹೆಸರು ಬಾರವೆ ಅವನಿಗೆ ಮೂರು ತಿಂಗಳು ನಿದ್ದೆ ಇರಲಿಲ್ಲ. "ಮಕ್ಕಳ ಬೊಕ್ಕಸ" ಎಂದೇ ಹೆಸರಿಟ್ಟದ್ದನಾದರೂ ಮಕ್ಕಳ ಅಜ್ಜಂದಿರು (ಮುದ್ರಣದ ಸಣ್ಣ ಅಕ್ಷರಗಳನ್ನೋದುವಷ್ಟು ದೃಷ್ಟಿಶಕ್ತಿಯುಳ್ಳವರಾಗಿದ್ದರೆ) ಓದುವಂತಹ ಗ್ರಂಥವದು. ಹಾಗೆಂದು "ಪಿತಾಮಹರ ಭಂಡಾರ"ವೆಂದರೆ ಪಿತಾಮಹರೇ ದುರ್ಲಭವಾದೀ ಕರ್ಣಾಟಕದಲ್ಲಿ ಕೊಂಡುಕೊಳ್ಳುವವರಾರು? ಹೆಸರು ಒಪ್ಪಲಿ, ಒಪ್ಪದಿರಲಿ – ಗ್ರಂಥವೊಂದು ಪೂರ್ಣವಾದ ಆನಂದ ಆತನಿಗೆ! "ಬರೆವ ಆವೇಶ ಬಂತು—ಬರೆದೆ; ಜನರಿಗೂ ಒಂದು ಆವೇಶ ಬಂದರೆ ಓದಲಿ!" ಎಂದುಕೊಂಡು ಸುಮ್ಮನಾಗುವ ಜಾತಿಯ ಗ್ರಂಥಕಾರನವನು.

ಮೂರು ರೂಪಾಯಿಯ ಅಂಚೆ ಚೀಟು ಹಚ್ಚಿ ರಿಜಿಸ್ಟರ್ ಮಾಡಿ ಅದನ್ನು ಮೈಸೂರಿನ 'ಗ್ರಂಥಸಾಗರ' ಕಂಪೆನಿಗೆ ಕಳುಹಿಸಿದನು. ಇಪ್ಪತ್ತೊಂದು ದಿನಗಳ ನಂತರ ಅದು ಆತನ ಸುಳ್ಯದ ಚಿಕ್ಕ ಗುಡಿಸಲಿಗೆ ಮರಳಿ ಬಂತು. "ಅತಿ ಚಿಕ್ಕದಾಯಿತು!" ಎಂದು ಗ್ರಂಥಸಾಗರ ಕಂಪೆನಿಯ ಮೆನೇಜರನ ಅಭಿಪ್ರಾಯ. "ಬೇಕಾದಷ್ಟು ಇಲ್ಲ" ಎಂದು ಅದೇ ಕಂಪೆನಿಯ ಗುಮಾಸ್ತನದೂ ಒಂದು ಟೀಕೆ!

ನಂಗಣ್ಣನು ಅದನ್ನು ಅಲ್ಲಲ್ಲಿ ತಿದ್ದಿದನು. ಕೆಲವು ಅಧ್ಯಾಯಗಳನ್ನು ವಿಸ್ತರಿಸಿದನು. ಆ ಮೇಲೆ ಅದನ್ನು ಪುನಃ ಅಂಚೆಕಟ್ಟೆಯವರ ವಶಕ್ಕೊಪ್ಪಿಸಿದನು. ಈ ಬಾರಿ ಅದರ ಮೇಲೆ 'ಟಾಯಗರ್ ಎಂಡ್ ಕೊ' ಎಂಬ ಹೆಸರು ವಿರಾಜಿಸುತ್ತಿತ್ತು,—ಬೆಂಗಳೂರಿನದೇ. ನಂಗಣ್ಣನಿಗೆ ಸ್ವಾಭಿಮಾನವಿತ್ತು.

ಈ ಬಾರಿ ಅದು ಒಂದು ತಿಂಗಳ ಮೇಲೆಯೇ ಮರಳಿ ಬಂತು.

ಪುನಃ ನಂಗಣ್ಣನು ತನ್ನ ಮಹಾ ಗ್ರಂಥವನ್ನು ವಿಸ್ತರಿಸಿದನು. ಪುನಃ ಈ ಕೃತಘ್ನ ಲೋಕಕ್ಕೆ ತಳ್ಳಿದನು. 'ಸಂಗ್ರಾಮ ಕಂಪೆನಿ'ಗೆ ಹೋಯಿತದು; 'ನವ ಗ್ರಂಥಾಲಯ'ಕ್ಕೆ ಪ್ರಯಾಣಬೆಳೆಯಿಸಿತು. 'ಚಿತ್ರರಂಜನ'—'ಕೂರ್ಮಕೋಟೆ'—'ಸರಸ್ವತೀ ಸಮುದ್ರ'– ಇಲ್ಲಿಗೂ ಹೋಯಿತು. 'ಕರ್ಣಾಟಕ ಪ್ರಾಚೀನ ಶಿಲ್ಪ ಕಲಾಸಂಘ'ವನ್ನೂ ಸಂದರ್ಶಿಸಿತೀ ಮಹಾಗ್ರಂಥ. ಸಾಹಿತ್ಯ ಪರಿಷತ್ತಿನವರೂ ತಮ್ಮ ಕೈಯಾಡಿಸಿ ಮರಳಿ ಕಳುಹಿದರು. ಅದೇ ಕತೆ—ಪುನಃ ಪುನಃ ಮರಳಿ ಬಂತು! ಪುನಃ ಪುನಃ ನಂಗಣ್ಣನಿಗೆ ಬಂದ ಪತ್ರಗಳ ಅಭಿಪ್ರಾಯವೂ ಇಷ್ಟು—'ಇನ್ನೂ ಚಿಕ್ಕದು!'

ನಂಗಣ್ಣನು ವಿಶೇಷ ಯೋಚನೆಗೀಡಾಗಲಿಲ್ಲ. ಮೇಜಿನ ಮುಂದೆ ಐದು ಕೊಡಪಾನಗಳಲ್ಲಿ ಶಾಯಿಯನ್ನಿರಿಸಿದನು. ಐದು ಗ್ರಾಸ್ ನಿಬ್ಬುಗಳನ್ನೂ ತಂದನು. ಮನೆಯೊಳಗಿನ ಪಾತ್ರೆ, ಹಂಡೆ, ಚರಿಗೆ ಎಲ್ಲವನ್ನೂ ಮಾರಿ, ನೂರ ಮೂವತ್ತು ರೀಮು ಕಾಗದ ತರಿಸಿದನು. ತನ್ನ ಅಜೇಯ ಲೇಖನಿಯನ್ನೆತ್ತಿ, ಉಸಿರು ಕಟ್ಟಿ, ಬರೆಯಲುಪಕ್ರಮಿಸಿದನು.

ಆ ಮಹಾಗ್ರಂಥದ ಹಸ್ತಪ್ರತಿಯು ಬೆಳೆಯಿತು. ನಂಗಣ್ಣನು ಬರೆದು ಬರೆದು ಹಾಕಿದನು. ಪುನಃ ಮೂರು ವರುಷಗಳ ತನಕ ಸುಳ್ಯದ ಆ ಚಿಕ್ಕ ಗುಡಿಸಲಿನಲ್ಲಿ ಲೇಖನಿಯ ಕರಕರ ಶಬ್ದವೊಂದೇ! ಪ್ರತಿಯೊಂದು ಅಧ್ಯಾಯವೂ ನೂರು ಮಡಿ ವಿಸ್ತರಿಸಲ್ಪಟ್ಟಿತು. ರಕ್ತ ಸಂಚಲನೆಯ ಮೇಲೆ ಎಂಭತ್ತು ಪುಟ, ತಲೆ ಬುರುಡೆಯ ಮೇಲೆ ನೂರೆಂಟು, ಉಗುರಿನ ಮೇಲೆ ಮೂವತ್ತು, ಇರುವೆಯ ಮೇಲೆ ಎಪ್ಪತ್ತು, ಟಿಪ್ಪು ಸುಲ್ತಾನನ ಯುದ್ಧದ ಮೇಲೆ ತೊಂಬತ್ತು—ಹೀಗೆ ಪುಟಗಳೇ ಪುಟಗಳು! ಆ ಪುಟ ಸಂಖ್ಯೆಯನ್ನು ಎಣಿಸಬೇಕಾದರೆ ಒಂದೇ ಒಂದು ಸುಲಭ ಉಪಾಯವು ಉಳಿಯಿತು:—ನಂಗಣ್ಣನು ತಂದ ನೂರ ಮೂವತ್ತು ರೀಮು ಕಾಗದದಲ್ಲಿ ನಾಲ್ಕುವರೆ ತಾಂವು ಮಾತ್ರ ಉಳಿದಿದೆ. ಹಾಗಾದರೆ ಅವನು ಬರೆದುದೆಷ್ಟು?

ನಿಸ್ಸಂದೇಹವಾಗಿ 130 × 500 = 6500–4½. ಆ ಮೇಲೆ ಸಂತೃಪ್ತಿಯ ನಿಟ್ಟುಸಿರಿಟ್ಟು ನುಡಿದನು ನಂಗಣ್ಣ— 'ಇನ್ನು ಯಾವ ಪ್ರಕಾಶಕರೂ ಇದನ್ನು 'ಇನ್ನೂ ಚಿಕ್ಕದು' ಎನ್ನುವುದುಂಟೇ? ಎನ್ನುವವರಿಗೆ— ಈ ಭೂಮಿಯು ನೆಲ್ಲಿಕಾಯಿಯಷ್ಟು ಚಿಕ್ಕದಾಗಿ ತೋರದೇ ಇದ್ದೀತೇ?' ಹೀಗೆನ್ನುತ್ತ ನಂಗಣ್ಣನೇನೂ

ಆ ಸುಳ್ಯದ ಚಿಕ್ಕ ಕೊಠಡಿಯಲ್ಲೇ ಸ್ಥಳ ವಿಲ್ಲ. ಮಡಿಕೇರಿಯಿಂದ ಬರುತಿದ್ದ ಬಸ್ಸನ್ನು ತನ್ನ ಮನೆ ಮುಂದೆ ನಿಲ್ಲಿಸಿ, ತನ್ನ ಮಹಾಗ್ರಂಥದ ಆ ಮಹಾಕಟ್ಟನ್ನು ಅದರಲ್ಲಿಡಲು ಕಂಡಕ್ಟರನಿಗೆ ಆಜ್ಞಾಪಿಸಿದನು.

ಕಂಡಕ್ಟರನು ಅದನ್ನು ಬಸ್ಸಿನ ಮಾಡಿಗೆ ಎತ್ತಲು ಯತ್ನಿಸಿದನು. ಆಗಲಿಲ್ಲ. ಅಷ್ಟು ಭಾರವದು! ಆಗಲೇ ನಂಗಣ್ಣನು ಆ ಕಂಡಕ್ಟರನನ್ನು ತಡೆದು ಹೇಳಿದನು—'ಇಲ್ಲ, ಅದನ್ನು ಮಾಡಿಗೆ ಹಾಕಿ, ನಾನು ಕೆಳಗೆ ಕುಳಿತುಕೊಳ್ಳಲಾರೆನು. ಅದು ನನ್ನೊಂದಿಗೇ ಇರಬೇಕು!'

'ಮಾಡಿಗೆ ಎತ್ತಲಾರದುದನ್ನು ನಿಮ್ಮೊಂದಿಗೆ ಇಡಲಾರಿರಿ. ಹಾಗೆ ನಿಮ್ಮೊಂದಿಗೆ ಇರಿಸಿಕೊಳ್ಳಲು ನಮಗೆ 'ರೂಲು' ಇಲ್ಲ!' ಎಂದು ಕಂಡಕ್ಟರನ ದಿಟ್ಟತನದ ಉತ್ತರ!

ಏನಿದು? ರೂಲು ಇಲ್ಲ? ನಂಗಣ್ಣನ ಮಹಾಗ್ರಂಥದ ಹಸ್ತಪ್ರತಿಯ ಮೇಲೂ ಬಸ್ಸಿನ 'ರೂಲ್ಸು'ಗಳೇ? ಆ ಮಹಾಪ್ರಯಾಸದ ಮಹಾಮೌಲ್ಯದ ಮಹಾಕಟ್ಟನ್ನಾತನು ಬಸ್ಸಿನಮಾಡಿನಲ್ಲಿ ಅನಾಥವಾಗಿ ಬಿಟ್ಟು, ತಾನು ಕೆಳಗೆ ನೆಮ್ಮದಿಯಿಂದ ಕುಳಿತುಕೊಳ್ಳಬಲ್ಲನೇ? 'ಛೀ ಛೀ!' ಎನ್ನುತ್ತ ಆ ಕಟ್ಟನ ಸಮೇತ ನಂಗಣ್ಣನು ಮೋಟಾರಿನಿಂದ ಇದಡಿ ದೂರದಲ್ಲಿ ನಿಲ್ಲಲು—ಟರ್ ಎನ್ನುತ್ತ ಮೋಟಾರು ಓಡಿಹೋಯಿತು.

ನಂಗಣ್ಣನು ಈಗಲೀಗ ಯೋಚನೆಗೊಳಗಾದನು. ಆ ಮಹಾಗ್ರಂಥವನ್ನು ಬರೆವ ಆಯಾಸಕ್ಕಿಂತ ಅದನ್ನೊಯ್ಯುವುದೇ ದೊಡ್ಡ ಸಮಸ್ಯೆಯಾಗಿ ಮಹಾಪ್ರಯಾಸಕರವೆನಿಸಿತು. ಒಂದು ಮೋಟಾರನ್ನು ತಾನೇ ಬಾಡಿಗೆಗೆ ನಿಶ್ಚಯಿಸಿದರೆ ಖರ್ಚು ಹೆಚ್ಚು! ವಿಮಾನವು ಈ ಊರಲ್ಲಿಲ್ಲ. ಕಟ್ಟು ಮಂಗಳೂರಿಗೆ ಹೋಗಬೇಕು (ಮಂಗಳೂರಿನ ಒಬ್ಬ ಪ್ರಖ್ಯಾತ ಪ್ರಕಾಶಕರಲ್ಲಿ ಒಯ್ಯುವ ನಿರ್ಧಾರ ಅವನದು).

ನಂಗಣ್ಣನ ಮಿದುಳು—ಅದೇನು ಸಾಮಾನ್ಯವೇ? ನೂರ ಮೂವತ್ತು ರೀಮು ಕಾಗದದ ಮೇಲೆ ಐದು ಕೊಡಪಾನ ಶಾಯಿಯನ್ನು ಐದು 'ಗ್ರಾಸ್' ನಿಬ್ಬುಗಳಿಂದ ಒಣಗಿಸಿದವನಿಗೆ ಈ ಮಹಾಗ್ರಂಥವನ್ನೊಯ್ಯಲು ಉಪಾಯ ಕಾಣದೇ? ಒಂದು ಮಂಗಳವಾರ ಅದನ್ನು ಸೆರೆಕರೆಯ ವೆಂಕಯ್ಯನ ಕೈಗಾಡಿಯ ಮೇಲಿರಿಸಿ, ವೆಂಕಯ್ಯನೊಂದಿಗೆ ತಾನೂ ಆ ಗಾಡಿಯನ್ನೆಳೆಯುತ್ತ ಮಂಗಳೂರಿಗೆ ಹೊರಟನು.

ಆ ಮಹಾಗ್ರಂಥದ ಯಾತ್ರೆಯ ಚರಿತ್ರವು ಪ್ರಪಂಚದ ಇತಿಹಾಸಕಾರರೆಲ್ಲರಿಂದ ಎಲ್ಲ ಭಾಷೆಗಳಲ್ಲಿಯೂ ಬಗೆಬಗೆಯಾಗಿ ವರ್ಣಿಸಲ್ಪಟ್ಟಿದೆ. ಕರ್ನಾಟಕದ ಇತಿಹಾಸದಲ್ಲಿ ಅದು ಸ್ವರ್ಣಾಕ್ಷರಗಳಿಂದ ಕೆತ್ತಲ್ಪಟ್ಟಿದೆ.

ಮಂಗಳವಾರ ಹೊರಟ ನಂಗಣ್ಣನು ಗುರುವಾರ ಪುತ್ತೂರಿಗೆ ತಲಪಿದನು. ಅಷ್ಟರೊಳಗೆ ಮಂಗಳೂರಿನ ಪತ್ರಿಕೆಯೊಂದರಲ್ಲಿ ಈ ಮಹಾಯಾತ್ರೆಯ ವಿಷಯವಾಗಿ ಮೂರು ಪಂಕ್ತಿಗಳು ಅಚ್ಚಾ

ಗಿದ್ದುವು. ಪುತ್ತೂರಿನವರು ಅಲ್ಲಿಯ ಮುಖಂಡ ರುದ್ರಪ್ಪನವರ ನೇತ್ರತ್ವದಲ್ಲಿ ನಂಗಣ್ಣನನ್ನು ಸ್ವಾಗತೀಕರಿಸಿ, ಅವನಿಗೂ ಆ ಕೈಗಾಡಿಯ ವೆಂಕಯ್ಯನಿಗೂ ಹೂಮಾಲೆ ಹಾಕಿ ಸತ್ಕರಿಸಿ ಕಳುಹಿ ಕೊಟ್ಟ ಮೇಲಂತೂ ಒಂದು 'ಕಲಂ' ಏವರ ಬಂತು ಮತ್ತೊಂದು ಪತ್ರಿಕೆಯಲ್ಲಿ! ದಾರಿಯುದ್ದಕ್ಕೂ ಅಲ್ಲಲ್ಲಿ ಜನರು ಗುಂಪು ಕೂಡಿ "ನಂಗಣ್ಣ ಕೀ ಜೈ!" ಎಂದು ಉದ್ಘೋಷಿಸುತ್ತ ಸನ್ಮಾನಿಸಿದರು. ಮಂಗಳೂರಿನ ಪತ್ರಿಕೆಗಳು ನಂಗಣ್ಣನ ವಿಷಯದಲ್ಲಿ ಅಗ್ರಲೇಖಗಳನ್ನು ಬರೆದುವು. ಕೆಲಪತ್ರಿಕೆಗಳು ನಂಗಣ್ಣನು ಕ್ರಮಿಸಿ ಬರುವ ರಸ್ತೆಯ ನಕಾಶವನ್ನು ಕೆತ್ತಿಸಿ ಅಚ್ಚು ಹಾಕಿದುವು. ಎಲ್ಲೆಲ್ಲಿಯೂ ನಂಗಣ್ಣನ ಮತ್ತು ಆ ಮಹಾಗ್ರಂಥದ ಗಾನ!

ಏಳು ದಿನಗಳ ನಂತರ ನಂಗಣ್ಣನು ಮಂಗಳೂರು ನಗರವನ್ನು ಪ್ರವೇಶಿಸಿದನು. ಊರಿನ ಹೆಬ್ಬಾಗಿಲಿನಲ್ಲಿ ಜಿಲ್ಲಾ ಕಲೆಕ್ಟರರು, ಮೂವತ್ತುಸಾವಿರ ಜನರ ಸಾಗರದ ನಡುವಿನಿಂದ ಹಾದು ಬಂದು ನಂಗಣ್ಣನಿಗೆ ಹಸ್ತಲಾಘವ ಕೊಟ್ಟು, "ಜಿಲ್ಲೆಯ ಮುಖ್ಯ ಪಟ್ಟಣವಿದಕ್ಕೆ—ಹೇ ಮಹಾಕವಿಯೇ!—ನಿನ್ನನ್ನು ಸ್ವಾಗತೀಕರಿಸುವೆವು!" ಎನಲು, ಮೊದಲೇ ಸಿದ್ಧವಾಗಿ ನಿಂತ ಬೇಂಡ್‌ಮೇಳದವರು ರಮ್ಯವಾದ ಸ್ವಾಗತಗೀತವನ್ನು ಬಾರಿಸಿದರು.

ನಂಗಣ್ಣನು ನಗರದ ಜನನಿಬಿಡ ರಸ್ತೆಗಳನ್ನು ಹಾದು—"ನಂಗಣ್ಣ ಕೀ ಜೈ!" "ಕರ್ಣಾಟಕ ಮಾತಾಕೀ ಜೈ!" ಎಂಬ ಉದ್ಘೋಷಕ್ಕೆ ತಲೆಯಲ್ಲಾಡಿಸುತ್ತ, ಪುನಃ ಪುನಃ ಆ ತಲೆಯನ್ನು ಗೌರವದಿಂದೆತ್ತಿ ನೋಡುತ್ತ, ನೆಟ್ಟಗೆ "ಶೀನಾ ಬ್ರದರ್ಸ್" ಎಂಬ ಪ್ರಾಮುಖ್ಯ ಸಂಸ್ಥೆಯ ಮುಂದೆ ಬಂದು ನಿಂತನು.

"ಎಪ್ಪತ್ತೈದು ಸಾವಿರ ರೂಪಾಯಿಗಳನ್ನು ಕೊಡಬಲ್ಲೆವು!" ಎಂದರು ಶೀನಾ ಬ್ರದರ್ಸ್.

"ಒಂದೂವರೆ ಲಕ್ಷಕ್ಕೆ ಚಿಕ್ಕಾಸು ಕಡಿಮೆಯಾದರೆ ಕೊಡುವಂತಿಲ್ಲ!" ಎಂದನು ನಂಗಣ್ಣ.

"ಒಂದು ಲಕ್ಷದ ಮೂವತ್ತೈದು ಸಾವಿರ!" ಎಂದರು ಶೀನಾ ಬ್ರದರ್ಸ್. ಆ ಬ್ರದರ್ಸ್‌ಗಳ ಹಣೆಯಿಂದ ಒಂದೇ ಸವನೆ ಬೆವರಿಳಿಯುತ್ತಿತ್ತು. ಇಂಥ ಲಾಭಕರವಾದ ಗ್ರಂಥದ ಹಸ್ತಪ್ರತಿಯು ತಪ್ಪಿ ಹೋದೀತೇ ಎಂದೇ ಭಯ ಅವರಿಗೆ!

"ವಂದೇ ಮಾತ!" ಎಂದನು ಗರ್ವಶಾಲಿ ನಂಗಣ್ಣ.

ಚರ್ಚಿಸಿ ಪ್ರಯೋಜನವಿಲ್ಲವೆಂದು ಶೀನಾ ಬ್ರದರ್ಸ್‌ಗಳಿಗೆ ಆಗಲೇ ತಿಳಿಯಿತು. ಚೆಕ್‌ಪುಸ್ತಕವನ್ನು ತಂದು ಆಗಲೇ ಅಂಗಡಿಯ ಮೆಟ್ಟಲಲ್ಲೇ ನಿಂತು 'ಚೆಕ್' ಬರೆದು ಕೊಡಲು, ರಸ್ತೆಯ ಮೇಲೆ ನಿಂತೇ ನಂಗಣ್ಣನು ಅದನ್ನು ಸ್ವೀಕರಿಸಿದನು. ನೆರೆದ ಜನಸ್ತೋಮವು "ವಂದೇ ಮಾತರಂ" ಗೀತವನ್ನು ಹಾಡಲು, ಅಂದಿನ ಆ ಚಿರಸ್ಮರಣೀಯ ಮಹಾಸಮಾರಂಭವು ಅಲ್ಲಿಗೇ ಕೊನೆಗಂಡಿತು. ನಂಗಣ್ಣನ ಮಹಾಯಾತ್ರೆಯು ಸಫಲವಾಯಿತು.

ಮಂಗಳೂರಿನ ಏಳು ದೊಡ್ಡ ಛಾಪಖಾನೆಗಳು ದಿವಾರಾತ್ರೆಯೆನ್ನದೆ ಎಡೆಬಿಡದೆ ಏಳು ತಿಂಗಳು ಕೆಲಸಮಾಡಿ ಆ ಗ್ರಂಥವನ್ನು ಅಚ್ಚು ಹಾಕಿದುವು. ಐವತ್ತು ಖಂಡಗಳಾಗಿ ಹೊರಗೆ ಬರಲಿರುವ ಆ ಮಹಾಗ್ರಂಥಕ್ಕೆ ಇನ್ನೂರೈವತ್ತು ರೂಪಾಯಿಗಳನ್ನು ಮುಂಗಡವಾಗಿ ಕಳುಹಿಸಿ ಮೂರು ಲಕ್ಷ ಜನರು ತಮ್ಮ ಹೆಸರುಗಳನ್ನು ರಿಜಿಸ್ಟರ್ ಮಾಡಿಸಿಕೊಂಡಿದ್ದರು.

ಪ್ರಕಟನಾ ದಿನದಲ್ಲಿ ಜಿಲ್ಲಾ ಕಲೆಕ್ಟರರ ಸ್ಪೆಶಲ್ ಹುಕುಮಿನಿಂದ ಶಾಲೆಗಳಿಗೂ ಕೋರ್ಟು-ಕಛೇರಿ-ಬ್ಯಾಂಕುಗಳಿಗೂ ರಜೆಕೊಡಲಾಯಿತು. ಮುದ್ರಣ ಮುಗಿದು, ಗ್ರಂಥವು ಪ್ರಕಾಶಿಸಲ್ಪಡುವಂದು ಹದಿನೇಳು ಲಕ್ಷ ಗಿರಾಕಿಗಳು ಶೀನಾ ಬ್ರದರ್ಸ್‌ರವರ ಪುಸ್ತಕದಲ್ಲಿ ದಾಖಲಾಗಿದ್ದರು. ಅದರ ವರ್ಣನೆಯನ್ನು ಮಂಗಳೂರು ನಿವಾಸಿಯೊಬ್ಬನು ಈ ಅರ್ಥಗರ್ಭಿತ ಮಾತುಗಳಲ್ಲಿ ಹೇಳುತ್ತಾನೆ:— "ಆ ಪ್ರಕಟನಾ ದಿನದ ವರ್ಣನೆಯನ್ನು ಪ್ರಕಟಿಸಿದ ಒಂದು ವಾರ ಪತ್ರಿಕೆಯು ಅಂದು ಎಂದಿಗಿಂತ ಹದಿನೆಂಟು ಸಾವಿರ ಪ್ರತಿಗಳನ್ನು ಹೆಚ್ಚಿಗೆ ಅಚ್ಚು ಹಾಕಿಸಿರಲು, ಆ ಪತ್ರಿಕೆಗಳೆಲ್ಲ ಮಾರಾಟವಾಗಿ, ಮತ್ತೆ ನಾಲ್ಕು ಸಾವಿರ ಜನರು ನಿರಾಶರಾಗಬೇಕಾಯಿತು!" ಆ ಮಹಾಗ್ರಂಥದ ವಿಷಯಕವಾದ ವಾರ್ತೆಯನ್ನೋದುವ ತವಕವು ಇಷ್ಟು ಇರಲು, ಆ ಗ್ರಂಥದ ವಿಷಯವೇನೆನ್ನಲಿ?

ಇನ್ನು ಪತ್ರಿಕೆಗಳು ಮಾಡಿದ ಆ ವಿಮರ್ಶೆಗಳೋ?—ಆ ಗ್ರಂಥದ 1398ನೇ ಪುಟವನ್ನು ತೆರೆದು ನೋಡಿದ "ಸಂಘಶಕ್ತಿ" ಎಂಬ ಪತ್ರಿಕೆಯು, ಆ ಪುಟದಲ್ಲಿ ಕರಡಿಯ ವಿಷಯಕವಾದ ಐದು ಪಂಕ್ತಿಗಳನ್ನು ಓದಿ, "ಕರಡಿಯ ವಿಷಯವಾಗಿ ಬರೆದ ಇಷ್ಟು ದೊಡ್ಡ ಗ್ರಂಥವು ಇದೇ! ಪ್ರತೀ ಒಬ್ಬ ಕರ್ನಾಟಕಾಭಿಮಾನಿಯೂ ಓದಲೇ ಬೇಕು!" ಎಂದಿದೆ

5330ನೇ ಪುಟದ ಮೇಲೆ ದೃಷ್ಟಿ ಹೊರಳಿಸಿದ "ಜ್ಞಾನ ಸಿಂಧು"ವು—"ವಕೀಲರಿಗೆ ಬೇಕಾದುದೆಲ್ಲ ಇದರಲ್ಲಿದೆ. ಎಲ್ಲ ವಕೀಲರೂ, ಹೈಕೋರ್ಟು ಜಡ್ಜರೂ, ನಿವೃತ್ತ ಜಡ್ಜಿಗಳೂ, ಕಕ್ಷಿಗಾರರೂ, ಇನ್ನು ಮುಂದೆ ಕಕ್ಷಿಗಾರರಾಗಬಹುದಾದವರೂ ಇದನ್ನೋದಿದರೆ ಕೋರ್ಟುಗಳ ಕೆಲಸಗಳು ಸುಲಭವಾಗುವುವು!" ಎಂದಿದೆ.

"ಮಾತೃ ವಿವೋಚನ"ವು ಹೀಗೆಂದಿದೆ.—"ಜೂಲು ನಾಯಿಗಳ ವಿಷಯ ತಿಳಕೊಳ್ಳಬೇಕಾದವರಿಗೆ ಇದು ಕೈಗನ್ನಡಿಯಂತೆ". (ಪುಟ 330)

"ಹೋಳಿಗೆ ಮಾಡುವವರಿಗೆ ಇದು ಸಾಧಾರವಾದ ಏಕಮಾತ್ರ ಶಾಸ್ತ್ರೀಯ ಗ್ರಂಥ" ಎಂದು "ಶುಕವಾಣಿ"ಯ ಮಾತು. (ಪುಟ 4844)

ಎಲ್ಲದಕ್ಕಿಂತಲೂ "ಗ್ರಾಮ ವ್ಯಾಘ್ರ"ದ ವಿಮರ್ಶೆಯೇ ಉತ್ತಮವೆನ್ನಬಹುದು. ಆ ಪತ್ರಿಕಾ ಸಂಪಾದಕರು ಗ್ರಂಥವನ್ನು ತೆರೆದು ನೋಡದೆನೇ "ಪ್ರಚಂಡವಾದುದು! ಮಾನವ ಇತಿಹಾಸದಲ್ಲಿ ಅತೀ ಮಹತ್ವದ, ಬೆರಗುಗೊ

ಸುವ, ಮಹಾಮೇರುವಿನಂತಹ, ಉಸಿರು ಕಟ್ಟಿಸುವ, ಪರ್ವತಾಕಾರ ಗ್ರಂಥವಿದು" ಎಂದು ಬರೆದಿರುವರು.

ಮಾರಾಟವು ಇನ್ನೂ 'ಅಗಣಿತ'ವೆನಿಸುತಿತ್ತು. ಆದರೆ, ಅಷ್ಟರಲ್ಲೇ, ಮಂಗಳೂರಿನ ಮನ್ಮಥರಾಯರ ಹೆಂಡತಿಯು ಆ ಗ್ರಂಥವನ್ನು ತೆರೆದು ನೋಡುತ್ತ 1785ನೇ ಪುಟದಲ್ಲಿ ತನ್ನ ಸ್ವಂತ ಭಾವ ಚಿತ್ರವನ್ನು ಕಂಡಳು. ವಿಷಯವು ಉತ್ತರ ಧ್ರುವದ ಕರಡಿಯ ವಿಷಯವಾಗಿತ್ತು. ಚಿತ್ರವು ಮನ್ಮಥರಾಯರ ಹೆಂಡತಿ ಸರೋಜಾ ದೇವಿಯದು! ಸೈ! ಏಳು ಲಕ್ಷ ರೂಪಾಯಿಗಳಿಗೆ "ಮಾನ ನಷ್ಟ"ದ ಫಿರ್ಯಾದು ದಾಖಲು!

ವಾದಿಯ ಪರವಾಗಿ ವಕೀಲರು ಹೇರಿಂಗು ಆರಂಭಿಸಿದರು:—"ಜ್ಯೂರಿ ಮಹಾಶಯರು ಈ ಮೊಕದ್ದಮೆಯ ಕೂಲಂಕಷವನ್ನು ತಿಳಿಯಬೇಕಾದರೆ ಈ ಗ್ರಂಥವನ್ನು ಕೇಳುವುದೊಳ್ಳೆಯದು" ಎನ್ನುತ್ತ ಓದಲಾರಂಭಿಸಿದರು. ಆದರೆ, 180 ಪುಟಗಳು ಮುಗಿಯ ಬೇಕಾದರೆ, ಒಂದು ಚಿಕ್ಕ ನಿದ್ದೆಯಿಂದೆಚ್ಚೆತ್ತ ಜ್ಯೂರಿಯವರು ವಕೀಲರನ್ನು ತಡೆದು, "ಸಾಕು —ಪ್ರಕಾಶಕರು ಗಿಲ್ಟಿ!" ಎಂದರು.

ಸರೋಜಾದೇವಿಗೆ ಏಳು ಲಕ್ಷ ರೂಪಾಯಿಗಳು "ಮಾನನಷ್ಟ"ಕ್ಕಾಗಿ ಕೊಡಿಸಲ್ಪಟ್ಟುವು. ಆ ಮೊಬಲಗಿಗೆ ಚೆಕ್ ಬರೆದು ಕೊಡುತ್ತ ಶೀನಾ ಬ್ರದರ್ಸ್‌ರವರು—'ಈ ಮೊಬಲಗು (ಏಳು ಲಕ್ಷ) ಆ ಗ್ರಂಥದ ಮಾರಾಟದಿಂದ ಹುಟ್ಟಿಬಂದ ಮೊಬಲಗಿನ ಒಂದು ತಿಂಗಳ ಬಡ್ಡಿಯಷ್ಟೂ ಆಗಲಿಲ್ಲ!' ಎನ್ನುತ್ತ ನಕ್ಕುಬಿಟ್ಟರು.

* * * *

ನಂಗಣ್ಣನವರು ಒಂದು ವರ್ಷದ ತನಕ ಮಂಗ್ಳೂರಲ್ಲೇ ಇದ್ದರು. ಇನ್ನೂ ಇರುತಿದ್ದರೇನೊ! ಆದರೆ, ಅವರ ಭೇಟಿ ಪಡೆದು ಧನ್ಯರಾಗಲು ಅಮೇರಿಕ-ಜಾಪಾನ್-ಇಂಗ್ಲಾಂಡು ಮೊದಲಾದ ಕಡೆಗಳಿಂದಲೂ ಜನರು ಬರಹತ್ತಿ, ಯಾತ್ರಿಕ ತೆರಿಗೆ(Pilgrim Tax) ಇಲ್ಲದ ಮಂಗಳೂರು ನಗರದ ರಸ್ತೆಗಳಲ್ಲಿ ಕೊಳೆಯಾಗಲು, ಸ್ಯಾನಿಟರಿ ಇನ್ಸ್‌ಪೆಕ್ಟರರು ಮುನಿಸಿಪಾಲಿಟಿಯವರಿಗೆ ರಾಜೀನಾಮೆ ಬರೆದು ಹಾಕಿದ ಕಾರಣವನ್ನು ಮುನಿಸಿಪಾಲಿಟಿ ಸಭೆಯವರು ನಂಗಣ್ಣನಲ್ಲಿಗೆ ಹುಡುಕಿ ಬಂದು, ಅವರಲ್ಲಿ ವಿನಂತಿಸಿದರೆಂದೂ, ಆ ವಿನಂತಿಯನ್ನು ತಿರಸ್ಕರಿಸಲಾರದೆ ನಂಗಣ್ಣನು ಪುನಃ ಸುಳ್ಯಕ್ಕೆ ಹೋದನೆಂದೂ ಇತಿಹಾಸದಲ್ಲಿ ಉಲ್ಲೇಖಿತವಾಗಿದೆ.

ಆ ಗ್ರಂಥವನ್ನು ಅಚ್ಚು ಹಾಕಿಸಿದಲ್ಲೆಲ್ಲ ಜನರ ನುಗ್ಗಾಟವನ್ನು ತಡೆಯಲಾಗುವುದಿಲ್ಲವೆಂದೋ, ಸಾವಿರಾರು ಝಾಡಮಾಲಿಗಳೂ ತೆಗೆಯಲಾರದಷ್ಟು ಕಸವಾಗುವುದೆಂದೋ ಸರಕಾರದವರು ಆದರ ಪುನರ್ಮುದ್ರಣದ ಮೇಲೆ ನಿರ್ಬಂಧವಿರಿಸಿರುವರು. ಅದನ್ನು ನೋಡಲಾರದ ನಾವು ಎಂಥ ದುರ್ಭಾಗಿಗಳು!

[ಲಂಡನಿನ 'ಪಂಚ್' ಪತ್ರಿಕೆಯಲ್ಲಿ ಪ್ರಕಟವಾದ ಒಂದು ಕಥೆಯ ವಸ್ತುವನ್ನು ಆಧರಿಸಿ ಬರೆದುದು.]

# ೩. ವಾಚಕ ಮಹಾಶಯ!

(ಅದ್ಭುತ ಪತ್ತೆದಾರಿ ಕತೆ.)

ಪತ್ತೆದಾರ ದೇವೇಂದ್ರ ಬಾಬುವು ಒಬ್ಬನೇ ನಂಬ್ರ 3ನೇ ಬೀದಿಯಿಂದ ನಡೆದುಹೋಗುತಿದ್ದನು. ಅವನ ಹದ್ದಿನ ಕಣ್ಣುಗಳು ಎಲ್ಲ ಕಡೆಗಳಿಗೂ ಚಲಿಸಿ, ಆ ಅವಸರದ ನಡಿಗೆಯಲ್ಲಿಯೂ ಪತ್ತೆ ಮಾಡಲೆತ್ನಿಸುತಿದ್ದುವು. ಕಣ್ಣಿಗೆ ಬೆರಳು ಹಾಕಿದರೆ ಕಾಣಿಸದಂತಹ ಸಮಯವದು. ಆದುದರಿಂದಲೇ ಜನರೆಲ್ಲ, ಬೆರಳುಗಳು ಕಣ್ಣಿನ ಕಡೆಗೆ ಮುಟ್ಟದಂತೆ ಅವುಗಳನ್ನು ಎರಡಡಿ ಕೆಳಗೆ ತಲೆಕೆಳಗಾಗಿ ನೇತಾಡಿಸಿ ನಡೆಯುತಿದ್ದರು. ಆಗ ಸಮಯ,-ಮಧ್ಯಾಹ್ನ ಹನ್ನೆರಡು ಘಂಟೆ!

ವಾಚಕ ಮಹಾರಾಜ! ಆಗ ಒಂದು ಮೋಟಾರು ಸರಕ್ಕನೆ ಆ ಮಾರ್ಗವಾಗಿ ಹಾದುಹೋಯಿತು. ದೇವೇಂದ್ರಬಾಬುವು, ಅದರ ಕೆಳಗೆ ಬೀಳುತಿದ್ದನೇನೋ! ಅಷ್ಟರೊಳಗೆ ಆತನು ಧಡಲ್ಲೆಂದು—ಮಾರ್ಗದ ಪಕ್ಕದ ಚರಂಡಿಗೆ ದುಮುಕಿದುದರಿಂದ ಬದುಕಿಕೊಂಡನು. ಮೋಟಾರು ಯಾವ "ಮೊಡೆಲ್" ಎಂದು ತಿಳಿಯದಿದ್ದರೂ, ಅದರಲ್ಲಿ ಕುಳಿತ ಮೂವರು ತರುಣಿಯರೂ ಇಬ್ಬರು ಯುವಕರೂ ಯಾವ ಜನರೆಂದು ಕೂಡಲೇ ಸೂಕ್ಷ್ಮ ಬುದ್ಧಿಯ ಬಾಬುವಿಗೆ ತಿಳಿಯಿತು. ಅವರು ಅದೇ ಊರಿನವರಾಗಿದ್ದರು. ಅದಲ್ಲದೆ ಕಿಲಕಿಲನೆ ನಗುತಿದ್ದರು. ಬಾಬುವು, ಹಾಗೆಯೇ ಇನ್ನೂ ಬರುತ್ತಿರುವ ಮೋಟಾರುಗಳ ಕಡೆಗೇ ಲಕ್ಷ್ಯವಿಟ್ಟು ಮುಂದುವರಿದನು.

ವಾಚಕ ಮಹಾಶಯ! ದೇವೇಂದ್ರ ಬಾಬುವು ಎಲ್ಲಿಗೆ ಹೋಗುತಿದ್ದನೆಂದು ನೀವು ಇಷ್ಟರೊಳಗಾಗಿ ಊಹಿಸಿರಬಹುದು. ನೀವೆಣಿಸಿದಂತೆ ಆತನು ನಿಜವಾಗಿಯೂ ನಂಬ್ರ 4ನೇ ಬೀದಿಗೆ ಬಂದನು. ಅಲ್ಲಿಗೆ ಬಂದು ಕೆಲವಂತರ ನಡೆದು ಹೋಗಿ, ಒಂದು ಚಿಕ್ಕ ಮನೆಯ ಮುಂದೆ ನಿಂತು, ಅತ್ತಿತ್ತ ನೋಡಿದನು. ಆ ಮೇಲೆ, ಮೆಟ್ಟಲು ಹತ್ತಿ, ಕದತಟ್ಟಿದನು.

ವಾಚಕ ಮಹೋದಯ! ಆಗ ಏನಾಯಿತೆಂದು ನೀವು ಕೂತೂಹಲಪಡಬಹುದು. ಸಹಜವೆ. ಕದವು ತಟ್ಟನೆ ತೆರೆಯಲ್ಪಟ್ಟಿತು. ಐದಡಿ ಆರು ಇಂಚು ಎತ್ತರವುಳ್ಳ (ಕೂದಲು ಕೂಡಿ ಐದಡಿ ೬॥ ಇಂಚು) ಘೋರಾಕಾರದ ಓರ್ವ ಸ್ತ್ರೀಯು ಹೊಸ್ತಿಲಲ್ಲಿ ನಿಂತು, ದೇವೇಂದ್ರ ಬಾಬುವನ್ನು ದುರದುರನೆ ನೋಡಿದಳು.

ವಾಚಕ ಮಹಾಸ್ವಾಮಿ! ಆಗ ದೇವೇಂದ್ರ ಬಾಬುವು ಹೆದರಿ, ಕಂಗಾಲಾಗಿ, ಮೂರ್ಛೆ ಹೋದನೆಂದು ನೀವು ಭಾವಿಸಿರಬಹುದು. ಇಲ್ಲ; ಲಕ್ಷೋಪಲಕ್ಷ ಕಳ್ಳರನ್ನು ಸೆರೆಹಿಡಿದು ಅನುಭವವಿದ್ದ ದೇವೇಂದ್ರ ಬಾಬುವಿಗೆ ಈ ಸ್ತ್ರೀಯನ್ನು ಕಂಡ ಕೂಡಲೇ ಮೂರ್ಛೆ

ಹೋಗಲಿಲ್ಲ. ಆದರೆ, ಎದೆನಡುಗಿತು. ಕೂಡಲೇ ಧೈರ್ಯವನ್ನು ತಂದುಕೊಂಡು,-ಭಯವನ್ನು ತೋರ್ಪಡಿಸದೆ, ಕಿಸುನಕ್ಕನು. ಫಟ್!—ದೇವೇಂದ್ರ ಬಾಬುವಿನ ಕೆನ್ನೆಯ ಮೇಲೆ ನಾಲ್ಕು ಬೆರಳುಗಳ ಕೆಂಪಗಿನ ನಾಲ್ಕು ಲೋಳೆಗಳು ತಕ್ಷಣವೇ ಎದ್ದು ನಿಂತವು.

ವಾಚಕ ಮಹರ್ಷಿ! ದೇವೇಂದ್ರ ಬಾಬುವಿನ ಕೆನ್ನೆಗೆ ಹೊಡೆದ ಆ ಸ್ತ್ರೀಯಾರೆಂದೂ, ಆ ಮನೆ ಯಾರದ್ದೆಂದೂ, ಆ ಮನೆ ಮುಂದೆ ನಿಂತಾಗ ದೇವೇಂದ್ರ ಬಾಬುವು ಅತ್ತಿತ್ತ ನೋಡಿದುದೇಕೆಂದೂ ನೀವು ಸಹಜವಾಗಿ ತಿಳಿದಿರಬಹುದು. ಆಕೆ ಆತನ ಹೆಂಡತಿ; ಆ ಮನೆ ಅವರದು; ಹೆಂಡತಿ ಹೊಡೆಯುವಳೆಂದು ಖಚಿತವಿದ್ದ ಬಾಬುವು, ಆ ಹೊಡೆತದ ಶಬ್ದವನ್ನು ಕೇಳಲು ಜನರು ಅತ್ತಿತ್ತ ಸಂಚರಿಸುವರೋ ಎಂದು ನೋಡಿದುದು; ದೇವೇಂದ್ರ ಬಾಬುವು ಹನ್ನೊಂದು ಘಂಟೆಯೊಳಗೆ ಅಕ್ಕಿ ತರುವೆನೆಂದು ಬೆಳಿಗ್ಗೆ 6ಕ್ಕೆ ಹೊರಟವನು ಹನ್ನೆರಡು ಘಂಟೆಗೆ ಮನೆಗೆ ಬರಿಗೈಯಾಗಿ ಬಂದಿರುವುದನ್ನು ನೋಡಿ, ಮಡದಿ ಒಂದೇಟು ಇಟ್ಟಳು. ದೇವೇಂದ್ರ ಬಾಬುವು ಗಹಗಹಿಸಿ ನಕ್ಕನು.

ವಾಚಕ ಮಾಣಿಕ್ಯ! ದೇವೇಂದ್ರ ಬಾಬುವು, ಆ ಪೆಟ್ಟನ್ನು ತಿನ್ನುವ ಮೊದಲೂ, ಪೆಟ್ಟುತಿಂದ ಮೇಲೂ ಏಕೆ ಆನುಕ್ರಮವಾಗಿ ಕಿಸು ಮತ್ತು ಗಹಗಹಿಸಿ ನಕ್ಕನೆಂದು ನೀವು ಆಶ್ಚರ್ಯ ಪಡಬಹುದು. ಆತನು ರೇಗಿದ್ದರೆ ಆಕೆ ಖಂಡಿತವಾಗಿ ಮತ್ತೊಂದು ಏಟನ್ನು ಕೊಡುತಿದ್ದಳು. ಮಾನವ ಅಂತರ್ಯವನ್ನೂ ವಸ್ತು ಪರಿಸ್ಥಿತಿಯನ್ನೂ ವಿದ್ಯಮಾನಗಳನ್ನೂ ಐದುವರೆ ಅಡಿಯ ಹೆಂಗಸರನ್ನೂ ಮೇಲಾಗಿ ತನ್ನ ಹೆಂಡತಿಯನ್ನೂ ಚೆನ್ನಾಗಿ ಬಲ್ಲ ಬಾಬುವು, ಅದನ್ನೆಲ್ಲ ಬಲ್ಲೆನೆಂದೇ ನಕ್ಕನು; ಮತ್ತು ಅಷ್ಟಾಗುವ ಮೊದಲೂ ಅಷ್ಟಾದ ಮೇಲೂ ನಗಬಲ್ಲನೆಂದೇ ನಕ್ಕನು. ನಗುತ್ತ ನಗುತ್ತ, ಮೆಲ್ಲನೆ ಮನೆಯೊಳಗೆ ಹೋದನು. (ಹಾಗೆ ಹೋದುದು ಕೂಡ ಹೋಗಬಲ್ಲೆನೆಂದು.)

ವಾಚಕ ಮಹಾತ್ಮ! ಅಂತಹ ಮನೆಯೊಳಗೆ ಹೊಕ್ಕಿದ ಬಾಬುವು ಏನಾದನೆಂದು ನೀವು ಚಿಂತಿಸಬಹುದು. ನಡೆಯಿರಿ, ನಾವೂ ಆತನನ್ನು ಹಿಂಬಾಲಿಸೋಣ. ಬಾಬುವು ಒಳಗೆ ಹೋದವನೇ, ಸಟ್ಟಗೆ ತನ್ನ ಕೊಠಡಿಗೆ ಹೋದನು. ಅಲ್ಲಿ ಗಾಢಾಂಧಕಾರವು ತುಂಬಿತ್ತು. ಆದರೆ, ಬಾಬುವು ಹೆದರಲಿಲ್ಲ. ಧೈರ್ಯದಿಂದ ಹಜ್ಜೆಯಿಡುತ್ತ ಮುಂದರಿದು ಹೋಗಿ, ಒಂದು ಕಿಟಕಿಯ ಬಾಗಿಲುಗಳನ್ನು ತೆರೆದನು!

ವಾಚಕ ಮಹತೋಭಾರ! ಆಗ ಏನಾಯಿತೆಂದು ನೀವು ಕೇಳಬಹುದು. ಜಗ್ಗನೆ ಆ ಕೊಠಡಿಯೆಲ್ಲ ಸೂರ್ಯನ ಬೆಳಕಿನಿಂದ ಪ್ರಕಾಶಮಾನವಾಯಿತು. ಆ ಬೆಳಕಿನಲ್ಲಿ ಬಾಬುವು, ಗೋಡೆಗಳ ಮೇಲೆ, ತಗಣೆಗಳನ್ನೊಡೆದಾದ ರಕ್ತ ಪಥಗಳನ್ನು ನೋಡಿದನು. ಆದರೂ, ಅವನ ಎದೆ ಧಸಕ್ಕೆನ್ನಲಿಲ್ಲ. ಲಕ್ಷ

ಜನರ ರಕ್ತದ ಕಾಲಿವೆಗಳನ್ನು ಹರಿಯಿಸಿದವನಿಗೆ ಈ ನೋಟವು ವಿಶೇಷವೆನಿಸೀತೇ? ನೀವೇ ಹೇಳಿರಿ. ಬಾಬುವು ಚಿತ್ತ ಸ್ಥೈರ್ಯವನ್ನು ಕಳಕೊಳ್ಳದೆ ತನ್ನ ಅಂಗಿಯನ್ನೂ ಟೊಪ್ಪಿಯನ್ನೂ ಶರ್ಟನ್ನೂ ಧೋತರವನ್ನೂ, ಗಂಜಿಪ್ರಾಕನ್ನೂ, ಗೋಡೆಗೆ ಇದ್ದ ಒಂದು ಚಿಕ್ಕ ಆಣಿಗೆ ಸಿಕ್ಕಿಸಿ, ಮತ್ತೊಂದು ಆಣಿಯಿಂದ ಒಂದು ತುಂಡು ಬೈರಾಸನ್ನು ತೆಗೆದು, ಅದರ ತೂತುಗಳು ತನಗೆ ಕಾಣಿಸದಂತೆ ಅದನ್ನು ಉಟ್ಟುಕೊಂಡನು! ಅಷ್ಟರೊಳಗೆ, ಅಂಗಿ—ಟೊಪ್ಪಿ, ಶರ್ಟು—ಧೋತರ ಮತ್ತು ಗಂಜಿಪ್ರಾಕನ್ನು ತೂಗಹಾಕಿದ ಆಣಿಯು ಗೋಡೆಯೊಳಗಿಂದ ಸರಕ್ಕನೆ ಜಾರಿ, ಧಸ್ಸೆಂದು ಬಿತ್ತು!

ವಾಚಕ ಮದನಾಂಗ! ಆಗ ದೇವೇಂದ್ರ ಬಾಬುವು ಏನು ಮಾಡಿದನೆಂದು ತಿಳಿದುಕೊಳ್ಳಲು ನೀವು ಅತೀವ ಆತುರದಿಂದಿರಬಹುದು. ಬಾಬುವು ಆ ಉಡಿಗೆ ತೊಡಿಗೆಗಳ ರಾಶಿಯಿಂದ ಆ ಚಿಕ್ಕ ಆಣಿಯನ್ನು ಮುಕ್ಕಾಲು ಘಂಟೆಯೊಳಗೆ ಹುಡುಕಿ ತೆಗೆದನು. ಆ ಮೇಲೆ ಆ ಆಣಿಯನ್ನು ಪುನಃ ಗೋಡೆಗೆ ಇದ್ದ ತೂತಿನಲ್ಲೆ ಸಿಕ್ಕಿಸಿ, ವಿಶ್ವಾಸದಿಂದ ಆ ಉಡಿಗೆ ತೊಡಿಗೆಗಳನ್ನೆಲ್ಲ ಪುನಃ ಆ ಆಣಿಗೇ ಸಿಕ್ಕಿಸಿದನು!

ವಾಚಕ ಮಹೋದಾರ! ("ಮಹೋದಾರ"=ಇದನ್ನು ಮಹಾ—ಉದಾರ ಎಂದು ಸಂಧಿವಿಂಗಡಿಸಿ ಓದಬೇಕೆಂದು ಸೂಚನೆ) ಆಗ ಏನಾಯಿತೆಂದು ನೀವು ಪ್ರಶ್ನಿಸಬಹುದು. ಆ ಆಣಿಯು ಪುನಃ ಪುಸಕ್ಕೆಂದು ಜಾರಿ, ಘಸಕ್ಕೆಂದು ಬಿತ್ತು. ಆಗ ಠಕ್ಕೆಂದು ಶಬ್ದವಾಯಿತು. ಬಾಬುವಿನ ಎದೆ ಧಸಕ್ಕೆಂದಿತು. ಬಾಬುವು ಕೂಡಲೇ ಬಾಗಿ, ಬಿದ್ದ ಆ ಅಂಗಿ ಕಿಸೆಗೆ ಕೈಹಾಕಿ, ಕೈಯನ್ನು ಹೊರಗೆ ತೆಗೆದು ನೋಡಿದನು. ಕೂಡಲೇ ಕಣ್ಣಿಂದ ಭಸಕ್ಕೆಂದು ಅಶ್ರು ಪ್ರವಾಹವು ಇಳಿಯಿತು. ಬಾಬುವಿನ ಹುಡಿಬುರುಡೆಯು ಒಡೆದು ಕೆಲವು ಸಾವಿರ ಚೂರಾಗಿತ್ತು!

ವಾಚಕ ಮಹಾದಯಾಳು! ಆ ಮೇಲೆ ಬಾಬುವು ಏನು ಮಾಡಿದನೆಂದು ನೀವು ಆತುರ ಪಡಬಹುದು. ಆತನು ಹೆಚ್ಚು ಹೊತ್ತು ಅಳಲಿಲ್ಲ. ಕೆಲವೇ ಗಳಿಗೆಗಳೊಳಗೆ ಕಣ್ಣೀರನ್ನು ಒರಸಿ, ಒತ್ತರಿಸಿಬರುವ ನಿಟ್ಟುಸಿರುಗಳನ್ನು ಕ್ರಮಪಡಿಸಿ, ಆ ಚೂರುಗಳನ್ನು ಅಸಾಮಾನ್ಯವಾದ ಸ್ಥಿರ ಮನಸ್ಸಿನಿಂದ ಕಿಟಕಿಯ ಹೊರಗೆ ಬಿಸುಟಿ, ಅಲ್ಲಿಂದ (ಕೊಠಡಿಯಿಂದ) ಹೊರಬಿದ್ದನು!

ವಾಚಕ ಮೌಕ್ತಿಕ! ಕೊಠಡಿಯಿಂದ ಒಂದೇ ಒಂದು ತುಂಡು ಬೈರಾಸಿನಲ್ಲಿ ಹೊರಟುಹೋದ ಬಾಬುವು ಎಲ್ಲಿಗೆ ಹೋದನೆಂದು ನೀವು ಸುಲಭವಾಗಿ ಊಹಿಸಿರಬಹುದು. ಅಹುದು, ನೀವೆಣಿಸಿದಂತೆ ಬಾಬುವು ಬಚ್ಚಲು ಕೊಟ್ಟಗೆಯ ಕಡೆಗೆ ಹೋದನು. ಅಲ್ಲಿಗೆ ಹೋಗಿ, ನೋಡಿದಾಗ, ಬಲುತಣ್ಣಗಿನ ನೀರು ಇತ್ತು; ಸಾಬೂನು ಇರಲಿಲ್ಲ!

ವಾಚಕ ಮಂಚಸ್ಥ! ("ವಾಚಕ ಮಂಚಸ್ಥ" ಎಂಬುದಕ್ಕೆ ವಾಚಕರದ್ದಾಗಿರುವ ಮಂಚದಲ್ಲಿರುವವರೆಂಬ ಅರ್ಥ

ವಾಗಬಹುದಾದರೂ ಹೆಚ್ಚಾಗಿ ಜನರು ಮಂಚದಲ್ಲಿ ಒರಗಿ ಓದುವರಾದ ಕಾರಣ ಇಲ್ಲಿ 'ಮಂಚದಲ್ಲಿ ಮಲಗಿ ಓದುವ ವಾ ಚ ಕ ರು" ಎಂದು ಅರ್ಥಮಾಡಿ ಕೊ ಳ್ಳ ತ ಕ್ಕ ದ್ದು.) ಇಂತಹ ಪರಿಸ್ಥಿತಿಯಲ್ಲಿ ನೀವೇನು ಮಾಡುವಿರಿ? ಅದನ್ನು ಊಹಿಸಬೇಕಲ್ಲದೆ ವರ್ಣಿಸಲು ನಮ್ಮ ಲೇಖನಿಯು ಬಾರದು. ಬಾಬುವು ಒಲೆಯ ಬಳಿಯಲ್ಲಿ ಎಂದೋ ಅರ್ಧ ಉರಿದು ಬಿದ್ದಿದ್ದ ಒಂದು ತೆಂಗಿನ ಕಾಯಿ ಸಿಪ್ಪೆಯನ್ನು ತೆಗೆದು, ಮೈಗೆ ನೀರು ಹೊಯ್ದು, ಆ ದೊರಗಿನ ಸಿಪ್ಪೆಯಿಂದ ತನ್ನ ಮೈಯನ್ನು ತಿಕ್ಕಿ ಸ್ನಾನಮಾಡಿದನು!

ವಾಚಕ ಮಹಾದಯಾಳು! ಆಗ ಏನಾಗುವುದೆಂದು ನೀವು ಪ್ರಶ್ನಿಸುವ ಅವಶ್ಯವಿಲ್ಲ. ಬೆಳ್ಳಗಿದ್ದ ಬಾಬುವಿನ ದೇಹವೆಲ್ಲ, ಈ ಬಗೆಯ ಸ್ವದೇಶಿ ಸ್ನಾನದಿಂದ ಕೆಂಪಗಾಯಿತು. ಆ ದ ರೂ ಬಾ ಬು ವು ಪಿಟ್ಟೆಂದು ಮಾತಾಡದೆ ಕಣ್ಣೀರು ಸುರಿಸುತ್ತ ಮೈಯನ್ನು ಆ ತುಂಡು ಬೈರಾಸಿನಿಂದ ಉಜ್ಜಿ, ಸ್ನಾನ ಗೃಹ (ಅಥವಾ ಮಂದಿರ)ದಿಂದ ಹೊರಬಿದ್ದನು.

ವಾಚಕ ಮನೋಹರ! ('ಮನೋಹರನಾದ ವಾಚಕನೆಂಬರ್ಥ.) ನಾವೂ ಬಾಬುವನ್ನು ಹಿಂಬಾಲಿಸೋಣ. ಬಾಬುವು ಲಗುಬಗೆಯಿಂದ ನಡೆದುಹೋಗುತ್ತ, ಅಡಿಗೆ ಕೋಣೆಗೆ ತಲಪಿದನು. ಅಲ್ಲಿ, ಬಾಬುವಿಗಾಗಿ ಮಣೆ ಇಕ್ಕಲ್ಪಟ್ಟಿರಲಿಲ್ಲ. ಬಟ್ಟಲು ಇರಿಸಿರಲಿಲ್ಲ. ಬಾಬುವಿನ ಐದಡಿ-ಅರಿಂಚಿನ ಮಡದಿಯೂ ಇರಲಿಲ್ಲ. ಮುಖ್ಯತಃ ಒಲೆಯಲ್ಲಿ ಅಂದು ಬೆಂಕಿಮಾಡಿದ ಕುರುಹೂ ಇರಲಿಲ್ಲ!

ವಾ ಚ ಕ ಮಹೋನ್ನತ! ಆಗ, ದೇವೇಂದ್ರ ಬಾಬುವಿನ ಮನೋಸ್ಥಿತಿಯು ಹೇಗಾಗಬಹುದೆಂದೂ ಆತನು ಏನು ಮಾಡಿದನೆಂದೂ ನೀವು ಕೇಳಬಹುದು. ಮಾಡುವುದೇನು?— ಅಕ್ಕಿಯೂ ಕಟ್ಟಿಗೆಯೂ ಸಾಂಬಾರ ಜೀನಸುಗಳೂ ಇಲ್ಲದಿದ್ದರೆ ನಾವೂ ನೀವೂ ಮಾಡುವಂತೆ, ಮಹಾ ವಿಚಕ್ಷಣಶಾಲಿಯಾದ ಆ ಬಾಬುವು ಸೆಟ್ಟಗೆ (ಅಹುದು-ಆಗಲೂ ಬಾಗದೆ) ತನ್ನ ಕೊಠಡಿಗೆ ಹೋಗಿ,— ಆ ಕೊಠಡಿಯ ಗೋಡೆಗಳಲ್ಲಿ ತಮ್ಮ ಅಜರಾಮರ ಕೀರ್ತಿಯ ಚರಿತ್ರಗಳನ್ನು ರಕ್ತಾಕ್ಷರಗಳಲ್ಲಿ ಬರೆಯಿಸಿಕೊಂಡ ತಗಣೆಗಳ ಅಕ್ಷಯ ಸಂತಾನವಿರುವ ಒಂದು ಹರಕು ಚಾಪೆಯನ್ನು ತೆಗೆದು, ಬಿಡಿಸಿ, ಅದರ ಮೇಲೆ ಮಲಗಿದನು.

ವಾಚಕ ಮಹಾಜ್ಞಾನಿ! ಅಲ್ಲೇನಾಯಿತೆಂದು ನೀವು ಪ್ರಶ್ನಿಸಬಹುದು. ಹಸಿವಿಂದ ನಿದ್ದೆ ಬಾರದೆ ಹೊರಳಾಡುತ್ತಿರುವ ಬಾಬುವಿನ ಕೃಶ ದೇಹದ ಅಳಿದುಳಿದ ನೆತ್ತರನ್ನು ಹೀರುವೆವೆಂದು ಕಚ್ಚುತ್ತಿದ್ದ ಕೆಲವು ತಗಣೆಗಳ ಅಸ್ತಿತ್ವವನ್ನು ಬಾಬುವು ಒಂದೆರಡು ಗಂಟೆಗಳಲ್ಲಿ ತಿಳಿದು, ಕೋಪಗೊಂಡು ಮತ್ತೆರಡು ಘಂಟೆಗಳೊಳಗೆ ಕೆಲವನ್ನು ಪತ್ತೆ ಮಾಡಿ, ಕೈದು ಮಾಡಿ, ಮೆಜಿಸ್ಟ್ರೇಟರ (ಇಲ್ಲಿ ಮೆಜಿಸ್ಟ್ರೇಟರು' ಎಂಬುದಕ್ಕೆ "ನಿಷ್ಕಾರುಣ್ಯದ ಬೆರಳುಗಳು" ಎಂದು ಅರ್ಥ ಬರುವುದು.) ಮುಂದೆ ನಿಲ್ಲಿಸಿ . . . . . . . . . . ಆದರೆ, ವಾಚಕ . . . . .

ಆದರೆ, ನಾನಿನ್ನೂ "ವಾಚಕ . ." ಎಂದು ಸಂಬೋಧಿಸಲೇಕೆ? ಕಾಲಾಣೆಯ ಪತ್ರಿಕೆಯನ್ನು ಕಾಸಿಗೂ, ಕಾಸಿನ ಪತ್ರಿಕೆಯನ್ನು ಮುಫತ್ತಾಗಿಯೂ ಕೇಳಿ, ಮುಫತ್ತಾಗಿ ಕೊಡಲು ಹೋದ ಪತ್ರಿಕೆಯನ್ನು ಓದದ (ಅ) ವಾಚಕರೂ ಇರಬಹುದು. ಅವರನ್ನು "ವಾಚಕ ಮಾಣಿಕ್ಯ"ವೆಂದರೂ 'ಮೌಕ್ತಿಕ'ವೆಂದರೂ ಅವರಿಗೆ ತಿಳಿಯಲಾರದೆಂದು ನೆನೆಸಿ, ಈ ಅದ್ಭುತ ಪತ್ರೆದಾರಿ ಕಥೆಯನ್ನು ಇಲ್ಲಿಗೇ ಮುಗಿಸಿ, . . . . .

. . . . ಕತೆ ಮುಗಿದುದು.



# ೪. ದೇವರ ಕೊಲೆ

ಶ್ರೀಮಂತ ಜಗನ್ನಾಥನ ಮನೆಯ ಅಂಗಳದಲ್ಲಿ, ವಿದ್ಯುದ್ದೀಪಗಳಿಂದ ಕಂಗೊಳಿಸುವ ಚಪ್ಪರವು, ನೂರಾರು ಮಂದಿ ಲಲನೆಯರ ಕಿಲಕಿಲಾಟದಿಂದ ಕಲ್ಪನೆಯ ಸ್ವರ್ಗ ದೃಶ್ಯವನ್ನು ಕಣ್ಣ ಮುಂದೆ ತರುತಿತ್ತು. ಆ ನೂರಾರು ಲಲನೆಯರಂತೆ ನೂರಾರು ಪುರುಷರೂ, ನೂರಾರು ಬಗೆಯ ವಿನೋದಗಳಲ್ಲಿದ್ದರು. ವಸ್ತ್ರ, ಪೋಷಾಕು, ನಡೆ, ನುಡಿ, ದೃಷ್ಟಿ—ಎಲ್ಲವೂ ವಿಪರೀತ!

ಆ ಕೋಲಾಹಲದೊಳಗೆ,—ಅತಿ ಕೃಶ ಶರೀರದ, ಕರಿಯ ಚರ್ಮದ, ಹಸಿವಿನ ದೃಷ್ಟಿಯ, ಬಾಗಿದ ಬೆನ್ನಿನ ಮಾನವ ಪ್ರಾಣಿಯೊಂದು, ಅಸ್ಪಷ್ಟ ಹಜ್ಜೆಗಳನ್ನಿಡುತ್ತ ನುಸುಳಿ ಬಂತು. ಈ ಪ್ರಾಣಿಯನ್ನು ನೋಡಿದ ಕ್ಷಣವೇ ಕೋಲಾಹಲವು ಇಮ್ಮಡಿಯಾಯಿತು. "ಮಾಣು ಬಂದ—ಮಾಣು!" ಎಂಬ ಕೂಗು, ಏಕಕಾಲದಲ್ಲಿ ನೂರಾರು ಕಂಠಗಳಿಂದಲೂ ಹೊರಡಿತು. ಗದ್ದಲವನ್ನು ಕೇಳಿ, ಮನೆಯ ಧನಿ ಹೊರಗೆ ಬಂದನು.

"ಜಗನ್ನಾಥಾ, ಮಾಣು ಬಂದಿದ್ದಾನೆ; ಒಂದು ತಮಾಷೆ ಮಾಡಿಸು!'' ಎಂದು ವಿನಂತಿಸಿದಳು ವೇಣೂರಿನ ವೇದಾವತಿ.

"ಬೆಕ್ಕು; ನಾಯಿ, ಕೋತಿ, ಇಲಿ, ತಗಣೆ ಮೊದಲಾದುದರ ಕೂಗು ಕೂಗಿಸು!'' ಎಂದು ಅರ್ಜಿಮಾಡಿದಳು, ಮಂಗಳೂರಿನ ಮಾಲತಿ–(ಆಕೆ ಅವೆಲ್ಲ ಪ್ರಾಣಿಗಳಿಗೆ ಪ್ರತ್ಯಕ್ಷವಾಗಿ ಹೆದರಿ, ಪರೋಕ್ಷವಾಗಿ ಅವುಗಳ ಕೂಗು ಕೇಳಲು ಆತುರವುಳ್ಳವಳು.)

"ಅಥವಾ ಗ್ರಾಮಫೋನ್ ಸಂಗೀತ ಪುಸ್ತಕದೊಳಗಿನ ಎರಡು ಹಾಡು ಹಾಡಿಸಬಹುದು" ಎಂದು ತಿದ್ದುಪಡಿ ತಂದಳು ವಕೀಲರ ಓಣಿಯ ವತ್ಸಲೆ. (ಈಕೆಗೆ ಗ್ರಾಮಫೋನ್, ಅದರ ಸಂಗೀತ ಪುಸ್ತಕ ಮತ್ತು ಅದನ್ನು ತೆಗೆಸಿಕೊಟ್ಟ

ವೇಣೂ—ಇಷ್ಟರ ಮೇಲೆ ವಿಶೇಷ ಪ್ರೀತಿ.)

"ನಮಗೆ ಅದೊಂದೂ ಬೇಡ. ಹನುಮಂತ ಗುಡಿಯ ಸಾಂತಪ್ಪ ಭಟ್ಟರ ನಕಲಿಮಾಡಿ ತೋರಿಸಿದರಾದೀತು" ಎನ್ನುತ್ತ,—ಆಗಲೇ ಅಲ್ಲಿಗೆ ಗೃಹಿಣಿಯು ತೇಲುತ್ತ ಬಂದಳು.

ಗೃಹಿಣಿಯ 200 ರಾತ್ತ್ಲ ಭಾರದ ದೇಹವು ದೃಗ್ಗೋಚರವಾಗಿ, ಆ ದೇಹದೊಳಗಿಂದ ಆ ಚಿಕ್ಕ ಅಪ್ಪಣೆ ಹೊರಡುತ್ತಲೇ ಮೊದಲೇ ಮೌನವಾಗಿದ್ದ ಜಗನ್ನಾಥ ರಾಯನು ಉಸಿರನ್ನೆ ತಡೆದುಕೊಂಡನು. ಅತಿಥಿಗಳಾಗಿ, ಆ ಗೃಹಿಣಿಯ ಮಗಳ (ಜಗನ್ನಾಥರಾಯನ ಮಗಳೂ ಅಹುದು) ಮದುವೆಗೆಂದು ಬಂದವರೆಲ್ಲ "ಅಹುದಹುದು" ಎಂದರು.

ಇಷ್ಟೆಲ್ಲವನ್ನೂ ಮೌನವಾಗಿ ಕೇಳುತ್ತ ನಿಂತಿದ್ದ ಮಾಣುವಿನ ಕಣ್ಣುಗಳು ಪಿಳಿಪಿಳಿ ತಿರುಗಿದುವು. ಸುತ್ತುಮುತ್ತಲೂ ನೋಡಿ, ಒಬ್ಬೊಬ್ಬ ಹೆಂಗಸನ್ನು ಚೆನ್ನಾಗಿ ದೃಷ್ಟಿಸಿದನು. ನಿರಿಗೆ ಬಿದ್ದ ಆತನ ಮುಖದ ಮೇಲೆ ನಗು ಮೂಡಿತು. "ನಿಮ್ಮ ಸೂಚನೆಗಳಾದುವು. ನನ್ನದೊಂದು ಮಾತನ್ನು ಕೇಳುವಿರಾ?"

"ಹೇಳು, ಹೇಳು!"

"ನೀವು ಈ ತನಕ ನೋಡಿರದ, ಕೇಳಿರದ, ಊಹಿಸಿರದ ಒಂದು ಆಟವಿದೆ!"

"ಏನದು?"

"ನಿಮಗೆಲ್ಲರಿಗೆ ಈಗ ದೇವರು ಪ್ರತ್ಯಕ್ಷನಾಗುವನು."

"ದೇವರು?"

"ಅಹುದು, ದೇವರು! ಸಾಕ್ಷಾತ್ ಭಗವಂತನೇ ನಿಮ್ಮ ಮುಂದೆ ಬರುವನು. ಆಟವೆಂದೇ? ಆದರೆ, ನಿಜವಾಗಿಯೂ ಆಟಕ್ಕಿಂತ ವಿಶೇಷ, ನಿಜವಾಗಿಯೂ ದೇವನೇ ಬರಬಹುದು. ನಿಮಗೆ ಒಪ್ಪಿಗೆಯಿದೆಯೇ?

"ಅವಶ್ಯವಾಗಿ ಕಾಣುವೆವು!" ಎಂದು ಸಮ್ಮತಿ ಸೂಚಿಸಿದಳು ರೋಹಿಣಿ. (ಕೆಲನಿಮಿಷವಾದರೂ ದೇವರನ್ನು ಕಾಣುವ ತಾಳ್ಮೆ ತನ್ನಲ್ಲಿದೆ ಎಂದು ಇಲ್ಲಿ ವ್ಯಕ್ತಪಡಿಸುವುದಕ್ಕೆ ಸಂದರ್ಭ ದೊರೆಯಿತೆಂದು ಆಕೆಗೆ ಸಂತೋಷ.)

"ಆದರೆ ಕೋಟಿ ಸೂರ್ಯ ಪ್ರಭೆ ಇಲ್ಲವಷ್ಟೆ!" ಎಂದು ಲೀಲಾವತಿಯ ಆತುರದ ಪ್ರಶ್ನೆ. (ನೇತ್ರಚಿಕಿತ್ಸಾ ವಿಚಕ್ಷಣರೊಬ್ಬರು ಈಕೆಗೆ ಸುಲೋಚನಗಳನ್ನು ಕೊಡುತ್ತ,—"ಹೆಚ್ಚು ಬೆಳಕು ಕಣ್ಣಿಗೆ ಕೆಟ್ಟದು" ಎಂದಿದ್ದರು.)

"ಅವನೊಡನೆ ಲಕ್ಷ್ಮಿಯೂ ಬರುವಳೆ?" ಎಂದು, ಅಲ್ಲೆ ಅನತಿ ದೂರದಲ್ಲಿ ಕುಳಿತ ವಧೂವರರನ್ನು ದೃಷ್ಟಿಸುತ್ತ, ನಗುತ್ತ, ಗಂಗಕ್ಕನ ಪ್ರಶ್ನೆ. (ಈಕೆಗೆ ಮದುವೆಯಾಗಿ ಹತ್ತು ವರ್ಷ ಕಳೆದರೂ, ಪ್ರತಿಯೊಂದು ಮದುವೆ ಮಂಟಪದಲ್ಲಿ ನವವರನನ್ನು ಕಂಡ ಕೂಡಲೇ, 'ಈ ವರನಿಗೆ ನಾನೇ ಯೋಗ್ಯ ವಧುವಾಗಿ ಒಪ್ಪುತ್ತಿದ್ದೆ!' ಎಂಬ ಚಿಂತೆ.)

ಮಾಣುವು ತಲೆಯಲ್ಲಾಡಿಸಿದನು: "ಇಲ್ಲ, ಕೋಟಿ ಸೂರ್ಯ ಪ್ರಭೆಯಿಲ್ಲ; ಲಕ್ಷ್ಮಿಯೂ ಇಲ್ಲ. ಕೇವಲ ದೇವರು, ಬಲು ಸರಳವಾದ ಉಡುಗೆ ತೊಡುಗೆಗಳಲ್ಲಿ ಬರುವನು. ಆದರೆ,—''

''ಆದರೇನು?''

"ನೀವು ಆತನಿಗೆ ವರ ಕೊಡೆಂದು ಪೀಡಿಸಬಾರದು!''

"ದೇವರೊಡನೆ ವರ ಬೇಡುವುದು ಪೀಡೆಯೇ?" ಎಂದು ವತ್ಸಲೆಯ ಪ್ರಶ್ನೆ.

"ಪೀಡೆಯಲ್ಲವೆನ್ನು. ಆದರೆ, ವರಗಳು ಯೋಗ್ಯತಾನುಸಾರ ಕೊಡಲಾಗುವುವು. ವರಗಳನ್ನು ಕೇಳಿದ ಎಲ್ಲರಿಗೂ ಫಲ ದೊರೆಯುವುದೆನ್ನಲಾಗುವುದಿಲ್ಲ. ಸತ್ಪಾತ್ರಕ್ಕೆ ದಾನ, ಉಳಿದವರಿಗೆ ಅಪಮಾನ. ನಿಮಗೆ ಸಮ್ಮತಿ ಇದೆಯೇ?''

"ಇದೆ—ಇದೆ!''

"ಹಾಗಾದರೆ, ಕೆಲವೇ ನಿಮಿಷ ತಡೆದುಕೊಳ್ಳಿರಿ!' ಎನ್ನುತ್ತ, ವೇಣುವು ಜಗಲಿ ಹತ್ತಿ ಒಂದು ಬಾಗಿಲೊಳಗೆ ನುಗ್ಗಿ ಮಾಯವಾದನು.

"ಯಾರೇ ಅವನು?" ಎಂದು ತನ್ನ ಬಳಿ ಕುಳಿತ ರಾಮಿಯೊಡನೆ, ಕಮಲೆ ಪಿಸು ಮಾತಲ್ಲಿ ಕೇಳಿದಳು.

"ಒಳ್ಳೆ ಹಾಸ್ಯಗಾರನಂತೆ!" ಎಂದು ಗಟ್ಟಿಯಾಗಿ ಉತ್ತರ ಕೊಟ್ಟಳು ರಾಮಿ.

"ಯಾವಾಗಲೂ ಅವನು ನಗುತ್ತಿರೋದೇ; ಇತರರನ್ನೂ ನಗಿಸುವನು. ಬೇರೆ ಕಲೆಯೇ ಆತನಿಗರಿಯದು?" ಎಂದಳು ಸಂಕ್ರಾಂತಿ ಕೇರಿಯ ಗಂಗಾವತಿ.

"ಒಳ್ಳೆ ಹಾಸ್ಯವನ್ನು ಬರೆಯುವುದೂ ಇದೆ! ಒಂದು ದಿನ, ಬರೆಯುವುದಕ್ಕಿಂತ ಚೆನ್ನಾಗಿ ಮಾತಾಡುತ್ತಾನೆ; ಮತ್ತೊಂದು ದಿನ ಮಾತಾಡುವುದಕ್ಕಿಂತ ಚೆನ್ನಾಗಿ ಬರೆಯುತ್ತಾನೆ. ಅಂತೂ ಹುಟ್ಟು ಹಾಸ್ಯಗಾರ!—ನಮ್ಮವರಿಗೆ ಮಾಣುವಿನ ಮಾತು ಕೇಳುವುದರಲ್ಲಿಯೂ ಬರೆಹ ಓದುವುದರಲ್ಲಿಯೂ ತುಂಬ ಪ್ರೀತಿ!" ಎಂದು ನಳಿನಿಯು, ಮಾಣುವಿನ ಚರಿತ್ರವನ್ನೂ ತನ್ನ ಗಂಡನ ಅಭಿರುಚಿಯನ್ನೂ ಚುಟುಕಾಗಿ ಎರಡೇ ಪಂಕ್ತಿಗಳಲ್ಲಿ ಮಡಗಿ ಹೇಳಿದಳು.

ಅಷ್ಟರೊಳಗೆ "ಶ್ಯ್!" ಎಂದರೊಬ್ಬರು. ಎಲ್ಲರೂ ಒಮ್ಮೆಗೆ "ಶ್ಯ್!" ಎನ್ನಲು, ಮೂರು ನಿಮಿಷಗಳ ತನಕ, ನಾಗರಹಾವುಗಳೆಲ್ಲ ನಾಚಿಕೊಳ್ಳುವಂತೆ ಎಲ್ಲರೂ "ಸಸ್" ಎನ್ನುತ್ತ ಒಬ್ಬರನ್ನೊಬ್ಬರು ಮೌನವಾಗಿರ ಹೇಳುತ್ತಿರುವ ಪ್ರಯತ್ನವು ನಡೆಯುತ್ತಿರಲು,—ಜಗಲಿ ಮೇಲಿನ ಬಾಗಿಲು ತೆರೆಯಲ್ಪಟ್ಟು, ವಿಷ್ಣು ಪ್ರತ್ಯಕ್ಷನಾದನು. ಲಕ್ಷ್ಮಿ ಇರಲಿಲ್ಲ. ಕೋಟಿ ಸೂರ್ಯಪ್ರಭೆಯೂ ಕಾಣಿಸಲಿಲ್ಲ. ಕೇವಲ 25 ಕ್ಯಾಂಡಲ್ ಪವರಿನ ಎರಡು ವಿದ್ಯುದ್ದೀಪಗಳ ಕೆಳಗೆ ಒಬ್ಬ ವಿಷ್ಣು (ಅಥವಾ ಕೇವಲ ವಿಷ್ಣು). ಮುಖದಲ್ಲಿ ನಗೆಯಿಲ್ಲ; ಸ್ಪಂದನವಿಲ್ಲ; ಉಸಿರಿಲ್ಲ; ವಿಗ್ರಹದಂತೆ ನಿಂತಿರುವನು. ತಲೆಯ ಮೇಲೆ ಕೂದಲು ಇದೆ, ಕಿರೀಟವಿಲ್ಲ; ಕಂಠಕ್ಕೊಂದು ಚಿಕ್ಕ ಪುಷ್ಪ ಹಾರ

(ಹೂ ಬಹು ಪ್ರಿಯವಾಗಿದ್ದ ಕಾಲವದು.) ಮುಖಬಣ್ಣ ನಸುನೀಲಿ; ಪೀತಾಂಬರವನ್ನುಟ್ಟುಕೊಂಡಿರುವನು; (ಈ ಪೀತಾಂಬರವು ಈ ಮೊದಲು ಕೆಲವು ನೂರು ವಿಷ್ಣುಗಳುಟ್ಟುಕೊಂಡು, ವಿಸರ್ಜಿಸಿದುದು ); ಹೆಗಲ ಮೇಲೆ ಕೆಂಪಗಿನ ಎಲವಸ್ತ್ರ.

ಲಲನೆಯರೆಲ್ಲ ವಿಷ್ಣುವನ್ನು ನೋಡಿದರು. ನಗುಬಾರದು; ಅಳುವೂ ಬಾರದು,— ಅಂತಹ ಮುಖಚರ್ಯೆಯ ವಿಷ್ಣು! ನಂಬಿಕೆಯೂ ಹುಟ್ಟಲಿಲ್ಲ; ಮೊದಲಿದ್ದ ನಂಬಿಕೆಯು ಮಾಯವಾಗಲೂ ಇಲ್ಲ. ಭಕ್ತಿಯ ಲವಲೇಶದ ಅನುಭವ ಇಲ್ಲ. ತಾತ್ಸಾರವೂ ಇಲ್ಲ.

ಮೊದಲಾಗಿ ಜಗನ್ನಾಥರಾಯನೇ ಬಾಯ್ತೆಗೆದನು; "ಮಹಾಸ್ವಾಮೀ; ಕೆಲವೇ ಸಾಧುಸಂತರ ಕೆಲವು ವರ್ಷಗಳ ಸಂಗೀತ ಕಛೇರಿಗಳು ನಡೆದ ನಂತರ ಒಂದು ನಿಮಿಷ ಕಾಣಿಸಿಕೊಂಡ ತಾವು, ಅಪೇಕ್ಷಿಸುವ ಒಂದೆರಡು ನಿಮಿಷಗಳೊಳಗೆ ನಮಗೆ ಭೇಟಿಕೊಟ್ಟು ನಮ್ಮ ಗೃಹವನ್ನು ಪಾವನಗೊಳಿಸಿದಿರಿ!" ಎಂದು ಸ್ತೋತ್ರ ಮಾಡಿದರು.

ವಿಷ್ಣುವಿನ ತುಟಿಗಳಲ್ಲಾಡಿದುವು. "ದಾಸವೀರ ಜಗನ್ನಾಥಾ! ನಿನ್ನ ಈ ಮಗಳ ಮದುವೆಗಾಗಿ ನೀನು ಮಾಡಿದ ವೆಚ್ಚಗಳನ್ನೂ, ಮುಖ್ಯವಾಗಿ, ಇಲ್ಲಿ ಸೇರಿದ ಈ ಶ್ರೀಮಂತ ಲಲನೆಯರು ಯಥೇಚ್ಛ ಆನಂದಿಸುವಂತೆ ಮಾಡಿಕೊಟ್ಟ ಅನುಕೂಲತೆಗಳನ್ನು ಕಂಡು ಆನಂದಿತನಾಗಿ, ನನ್ನನ್ನೇ ನಾನು ತಡೆದುಕೊಳ್ಳಲಾರದೆ ಲಕ್ಷ್ಮಿಯು ಬೇಡವೆಂದರೂ—"ಮೊದಲೇ ನೀನು ಅವರ ಮನೆಯಲ್ಲಿ ಇದ್ದಿ. ನಾನೂ ಬರುವೆನು!" ಎನ್ನುತ್ತ ಬಂದೆನು !"

ಆ ಸ್ವರ! ಅದರಲ್ಲಿ ವ್ಯಂಗ್ಯೋಕ್ತಿ ಇತ್ತು. ಆದರೆ, ಅದು ಯಾರನ್ನೂ ಕಡಿಯಲಿಲ್ಲ. ಬದಲಾಗಿ ಒಂದು ಬಗೆಯ ಪರಿಣಾಮವನ್ನುಂಟುಮಾಡಿತದು. ಎಲ್ಲರೂ ಬೆಪ್ಪಾಗಿ ಮೌನವಾಗಿ ಕೇಳಿದರು.

"ಲಲನೆಯರೇ, ನನ್ನನ್ನು ನೋಡಿದುದಾಯಿತು. ಏನಾದರೂ ಕೇಳುವುದಿದೆಯೇ?"

"ತಡೆಯಿರಿ—ನನ್ನದೊಂದು ಪ್ರಶ್ನೆಯಿದೆ." ಎಂದು ವತ್ಸಲೆ ದಿಟ್ಟತನದಿಂದ ನುಡಿದಳು.

"ಏನದು?"

"ಈ ಪ್ರಪಂಚದಲ್ಲಿ ನಾವು ಅಪೇಕ್ಷಿಸುವ ವಸ್ತುವು ನಮಗೆ ಸಿಕ್ಕದಿರಲು ಕಾರಣವೇನು?"

"ನಮ್ಮ ಆಸೆಯು ಬೆಳೆಯುತ್ತಿರುವುದರಿಂದ! ಉದಾಹರಣಾರ್ಥ: ನೀನು ಮೂವರು ಯುವಕರ ಮೇಲೆ ಕಣ್ಣಿಟ್ಟಿರುತ್ತಿ....!"

ಸಭೆಯು ಅವಾಕ್ಕಾಯಿತು. ವಿಷ್ಣುವು ಹೀಗಾಡುವುದೆಂದರೆ! ಸೇರಿದವರೆಲ್ಲ ವತ್ಸಲೆಯನ್ನೇ ದಿಟ್ಟಿಸಿದರು. ವತ್ಸಲೆಯು ಶಿಲಾ ಪ್ರತಿಮೆಯಂತಾಗಿದ್ದಳು.

ಒಂದೆರಡು ನಿಮಿಷ ಈ ಬಗೆಯಾಗಿ ಮೌನ. ಆನಂತರ ನಳಿನಿಯು ಧೈರ್ಯತಾಳಿ, ಇಂತಹ ಠಕ್ಕ ವಿಷ್ಣುವು ತನ್ನನ್ನು ಗೆಲ್ಲಲಾರನೆಂದೆಣಿಸಿ,— "ಮಹಾಸ್ವಾಮೀ! ನನ್ನದೊಂದು ಪ್ರಶ್ನೆ:—

ದ್ರವ್ಯವೆಂಬುದಿಲ್ಲದಿದ್ದರೆ ಏನಾಗುವುದು?'' ಎಂದು ಪ್ರಶ್ನಿಸಿದಳು.

ವಿಷ್ಣುವಿನ ಉತ್ತರವು ಸಿದ್ಧ:— "ಲಲನೆ! ಪ್ರಪಂಚವು ಸುಖದಿಂದ ಖಂಡಿತವಾಗಿ ಸಾಗುವುದು. ನೆರೆಕರೆಯವರ ಬಂಗಾರದ ಆಭರಣಗಳನ್ನು ಎರವು ತಂದು, ಗಿಲಿಟಿನ ಆಭರಣಗಳನ್ನು ಅವರಿಗೆ ಪುನಃ ಕೊಡುವಂತಹ ಸಾಹಸಗಳಿಗೆ ಇಂಬು ದೊರೆಯಲಾರದು!"

ಸಭೆಯ ದೃಷ್ಟಿಯು ನಳಿನಿಯ ಕಡೆಗೆ ತಿರುಗಿತು. ನಳಿನಿಯು ಬಾಯನ್ನು ಮೂರಂಗುಲ ತೆರೆದು, ವಿದ್ಯುತ್ ಕುರ್ಚಿಯಲ್ಲಿ ಮರಣಪಟ್ಟವಳಂತೆ ಕುಳಿತಿದ್ದಳು.

ಈಗ ರೋಹಿಣಿಯ ಧೈರ್ಯವನ್ನು ಒರೆಗಲ್ಲಿಗೆ ಹಚ್ಚಿ ನೋಡುವಂತಹ ಕ್ಷಣ ಬಂತು. ಈಕೆಗೆ ದೇವರೆಂದರೆ ಮನಸ್ಸಿಗಾಗದು. ನಾಸ್ತಿಕಳೆಂದೇ ಇವಳನ್ನು ಇವಳ ಗೆಳತಿಯರು ದೂರುತಿದ್ದರು. "ನಾನು ಈ ಸುಳ್ಳು ದೇವರಿಗೆ ಹೆದರುವವಳೇ?'' ಎನ್ನುತ್ತ ಆಕೆ ಎದ್ದೇ ನಿಂತಳು. ಸಭಿಕರೆಲ್ಲ ರೋಹಿಣಿಯ ಧೈರ್ಯಕ್ಕಾಗಿ ಆಶ್ಚರ್ಯ ಪಡುತ್ತಿರಲು, ರೋಹಿಣಿಯು—"ಹೇ ಸುಳ್ಳು ವಿಷ್ಣು! ಹೇಳು,- ಮಾವಿನ ಮರಕ್ಕೆ ಎಷ್ಟು ಎಲೆಗಳು?" ಎಂದು ಪ್ರಶ್ನಿಸಿಯೇ ಬಿಟ್ಟಳು!

ರೋಹಿಣಿಯ ಹೊರತಾಗಿ ಮಿಕ್ಕವರ ಎದೆಗಳೆಲ್ಲ ದಡಬಡವೆನ್ನುತಿದ್ದುವು. ವಿಷ್ಣುವು ಈಗ ಎಂತಹ ಉತ್ತರವನ್ನು ಹೇಳುವನೋ ಎಂದೇ ಎಲ್ಲರಿಗೆ ಭೀತಿ ಸಮ್ಮಿಶ್ರವಾದ ಆತುರ.

"ಹಹಹಹಹ!"

ಅಷ್ಟು ಕರ್ಕಶ ನಗು! ಆದರೂ, ನಕ್ಕವನು, ವಿಷ್ಣುವೇ. "ಲಲನೇ!"

"ಏನು, ಹೇಳಿಬಿಡು!" ಎಂದು ರೋಹಿಣಿಯ ಪಂಥದ ಪ್ರಶ್ನೆ.

"ಲಲನೆ, ನೀನು ಬುದ್ಧಿಮತಿ ಅಹುದು. ನಾಲ್ಕು ದಿನ ಸಾಲೆಗೆ ಹೋಗಿ, ಎರಡಕ್ಷರ ಕಲಿವಾಗ ವಿಶ್ವವೇ ತನ್ನ ಕೈಮುಷ್ಟಿಯೊಳಗೆ ಬಂತೆಂದು ಭಾವಿಸಿ ನಡೆಯುತ್ತಿರುವಿ! ಸುಬ್ಬರಾಯರ ತೋಟದಲ್ಲಿ, ಸುಗಂಧಿ ಗಿಡಗಳ ಪುಂಜದ ಹಿಂದೆ ಶ್ರೀಪಾದ ರಾಯರೊಡನೆ ಮರೆಯಾಗಿ ನಿಂತು ಕೆಲವು ತಿಂಗಳಿಂದ ನಿತ್ಯವೂ ಸಸ್ಯಶಾಸ್ತ್ರವನ್ನು ಚರ್ಚಿಸುತ್ತಿರುವವಳೊಬ್ಬಳಿಗೆ ಆ ಸುಗಂಧಿ ಗಿಡಗಳ ಚಿಕ್ಕ ಪುಂಜದಲ್ಲಿ ಒಟ್ಟು ಎಷ್ಟು ಎಲೆಗಳಿವೆಯೆಂದು ಲೆಕ್ಕ ಇನ್ನೂ ದೊರೆತಿಲ್ಲ. ಅದನ್ನು ನಾನು ಬಲ್ಲೆ; ನಿನಗೂ ತಿಳಿಸಿದೆ. ಮಾವಿನ ಮರದ ಮೇಲೆ ಎಳೆಗಳಿವೆಯೆಂದೂ, ಕೆಳಗೆ ನಿಲ್ಲುವವರ ತಲೆ ಮೇಲೆ ಗೆಲ್ಲುಗಳನ್ನು ಮುರಿದು ಹಾಕುವಷ್ಟು ಭಾರವಿಲ್ಲವೆಂದೂ ತಿಳಿದರೆ ಸಾಕು.''

"ಅದೇನೆ ಹಾಗೆಂದರೆ?'' ಎಂದು ರೋಹಿಣಿಗೆ ಮುಕ್ತಿಯೆಂಬ ಮುಗುದೆಯ ಪ್ರಶ್ನೆ. "ನಾನರಿಯೆ!'' ಎನ್ನುತ್ತ ರೋಹಿಣಿ ಮೌನ!

ಅಷ್ಟರೊಳಗೆ ಒಂದು ಚಮತ್ಕಾರ ನಡೆಯಿತು. ಗೃಹಿಣಿಯು ಜಗ್ಗನೆ ಎದ್ದು, ಸಭೆಯಿಂದ ಪಲಾಯನ ಸೂತ್ರ ಹೇಳಿದಳು. ಅವಳನ್ನನುಸರಿಸಿ ಯಜಮಾನನು ಪರಾರಿ! ಇವರಿಬ್ಬರನ್ನನು

ಸರಿಸಿ ಉಳಿದವರು ಕಾಣೆ! ಅಲ್ಲಿ ಉಳಿದವನೊಬ್ಬನೇ—ವಿಷ್ಣು!

ಕಣ್ಣುರೆಪ್ಪೆ ಮುಚ್ಚಿ ತೆಗೆವಷ್ಟರೊಳಗೆ ಸಭೆಯು ಚೆದರಿದುದನ್ನು ನೋಡುತ್ತ ವಿಷ್ಣುವಿನ ಕಣ್ಣುಗಳು ವಿನೋದದಿಂದ ನಲಿದಾಡಿದುವು. ಅವನೂ ಮಾಯವಾದನು.

ಅರ್ಧ ತಾಸಿನ ಮೇಲೆ ಗೃಹಿಣಿಯು ಮಾಣುವನ್ನು ಮನೆಯುಪ್ಪರಿಗೆ ಕರೆದಳು. ಮಾಣುವು, ಅದೇ ಹಸಿದ ಕಣ್ಣುಗಳಿಂದ ಆಕೆಯನ್ನು ನೋಡುತ್ತ ಅಪ್ಪಣೆ ಕಾಯುತ್ತ ನಿಂತನು.

"ಮಾಣೂ! ಸತ್ಯ ಹೇಳು—ಆತನು ನಿಜವಾಗಿಯೂ ವಿಷ್ಣುವೇ?"—ಗೃಹಿಣಿಯ ಎದೆಯು ಮೇಲುಬ್ಬಸದಿಂದ ತಿದಿಯಂತೆ ಬುಸುಗುಟ್ಟುತಿತ್ತು.

"ಅಲ್ಲದುಂಟೇ ಅಮ್ಮಾ? ಸಾಕ್ಷಾತ್ ವಿಷ್ಣುವೇ ಪ್ರತ್ಯಕ್ಷನಾದನೆನ್ನಬಹುದು. ಅಥವಾ ಅವನ ಪ್ರತಿಸಿಧಿಯನ್ನು ಕಳುಹಿದನೇನೋ! ಅಂತೂ ಆತನು ಆಡಿದುದೆಲ್ಲ ಸತ್ಯ!"

"ಸಾಕು ಮಾಣೂ! ವಿಷ್ಣುವು ನಿಜವಾಗಿಯೂ ಮಾನವ ದೇಹವನ್ನು ಧರಿಸಿಬಂದು, ನಮ್ಮ ವಿನೋದವನ್ನು ವಿಷಾದವಾಗಿ ಮಾರ್ಪಡಿಸುವನೆಂದು ನಾನೆಣಿಸಿರಲಿಲ್ಲ. ನಾನು ಓಡಿಬಂದೆ. .... ಏಕೆಂದರೆ..... ಆದರೆ, ಅದೆಲ್ಲ ಬೇಡ. ಈಗ, ಹೇಳು! ಆ ವಿಷ್ಣುವನ್ನು ಕರೆಸಿದ ನೀನು ಅವನನ್ನು ಕೊಲ್ಲಲಾಪೆಯಾ?"

"ಬಲ್ಲೆ; ಆದರೆ ....."

"ಆದರೇನು, ಬೇಗ ಹೇಳು!"

"ಅದಕ್ಕೆ ಇನ್ನೂರು ರೂಪಾಯಿ ಖರ್ಚು ಇದೆ."

"ಇನ್ನೂರು?—"

"ಒಂದು ಪೈಯೂ ಕಡಿಮೆ ಇಲ್ಲ. ಸಾಮಾನ್ಯ ವಿಷವಾಗಲಿ ಬಂದೂಕಾಗಲಿ ವಿಷ್ಣುವಿಗೆ ನಾಟದು."

ಗೃಹಿಣಿಯು ಒಂದೇ ಕ್ಷಣ ಆಲೋಚಿಸಿದಳು. ಆ ಮೇಲೆ ತನ್ನ ಕುತ್ತಿಗೆಯಿಂದೊಂದು ಆಭರಣವನ್ನು ತೆಗೆದು, ಮಾಣುವಿಗೆ ಕೊಟ್ಟಳು.

* * * *

ಅರ್ಧ ಘಂಟೆಯ ನಂತರ ಮಾಣುವು ಬಂದು, ವಿಷ್ಣುವು ಸತ್ತು ಸುಣ್ಣವಾದನೆಂದೂ, ಭಯಂಕರ ಎಸಿಡುಗಳನ್ನು ಹೊಟ್ಟೆಗೆ ಹಾಕಿ ತಾನೇ ಕೊಂದು ಬಂದೆನೆಂದೂ ತಿಳಿಸಿದನು. ಗೃಹಿಣಿಯು ಸಂತೃಪ್ತಿಯ ನಿಟ್ಟುಸಿರಿಟ್ಟಳು!

* * * *

ನಗರದ ಗಡಿಯ ಒಂದು ಚಿಕ್ಕ ಗುಡಿಸಲಿನಲ್ಲಿ ಬೆಳಕಿಲ್ಲದ ಕೊಠಡಿಯಲ್ಲಿ, ಮತ್ತೋರ್ವ ಗೃಹಿಣಿ ಕುಳಿತು ಮಾಣುವನ್ನು ಆತುರದಿಂದ ನಿರೀಕ್ಷಿಸುತಿದ್ದಾಗ, ಮಾಣುವು ಬಂದು,—"ಲಕ್ಷ್ಮೀ!" ಎಂದನು. ಲಕ್ಷ್ಮಿಯು ತಟ್ಟನೆದ್ದು ಬಾಗಿಲು ತೆರೆದು, ಆನಂದ ಬಾಷ್ಪಗಳಿಂದ ಗಂಡನ ಮೈಮುಟ್ಟಿ ಸವರಿದಳು. ಕತ್ತಲೆ. ಒಬ್ಬರಿನ್ನೊಬ್ಬರ ಮುಖವನ್ನು ನೋಡಲಾಗದಿದ್ದರೂ, ಅವರ ಪ್ರೇಮಮಯ ಆತ್ಮಗಳು ಮಾತ್ರ ಒಂದನ್ನೊಂದು ನೋಡುತಿದ್ದುವು; ಸಂಭಾಷಿಸುತಿದ್ದುವು.

"ಲಕ್ಷ್ಮೀ!"

"ಬಂದಿರಾ?"

"ಅಹುದು ಲಕ್ಷ್ಮೀ. ಕಳೆದೆರಡು ದಿನಗಳಿಂದಲೂ ನೀನು ಊಟ ಮಾಡಿರುವೆಯೊ ಲಕ್ಷ್ಮೀ?"

"ಅಕ್ಕಿ ಇರಲಿಲ್ಲ. ಆದರೆ....."

"ಆದರೆ ತಿಳಿಯಿತು. ನನ್ನನ್ನು ಮಾತ್ರ ಧ್ಯಾನಿಸಿ, ನನ್ನ ಮೂರ್ತಿಯಿಂದಲೇ ಹೊಟ್ಟೆಯನ್ನು ತುಂಬಿಸಿಕೊಂಡಿದ್ದೆ. ಲಕ್ಷ್ಮೀ—ನೀನು ಲಕ್ಷ್ಮಿಯೆಂಬುದನ್ನು ಜಗತ್ತು ಅರಿತಿಲ್ಲ—ಬೇಡ! ನಾನು ಮಾತ್ರ ತಿಳಿದಿರುವೆ....ಇದೋ ಲಕ್ಷ್ಮೀ, ಬಂಗಾರದ ಆಭರಣ--15 ಪವನುಗಳದ್ದು!"

ಮಾಣುವು ಆಭರಣವನ್ನು ತನ್ನ ಹೆಂಡತಿಯ ಕೈಗೆ ಕೊಟ್ಟನು. ಆದರ ಕಡೆಗೆ ವಿಶೇಷವಾದ ತೃಷೆಯ ದೃಷ್ಟಿಯನ್ನಿಡದೆ ಲಕ್ಷ್ಮಿಯು ಅದನ್ನು ಕೈಯಲ್ಲಿ ಹಿಡಿದುಕೊಂಡು,—"ಆಭರಣ? ಹದಿನೈದು ಪವನಿನದು? ಹೇಗೆ-ಎಲ್ಲಿಂದ?" ಎಂದು ಪ್ರಶ್ನಿಸಿದಳು.

"ದೇವರ ಕೊಲೆ ಮಾಡಿದೆ!"

"ದೇವರ ಕೊಲೆ?"

"ಅಹುದು, ಜಗನ್ನಾಥನ ಮನೆಯಲ್ಲಿ ದೇವರ ಕೊಲೆಯಾಯಿತು. ನಾನು—ನಾನೇ ದೇವನಾಗಿದ್ದೆ."—

ಮಾಣುವು ವಿವರಿಸಿದನು. ಲಕ್ಷ್ಮಿಯು ಕೇಳಿದಳು. ಇಬ್ಬರೂ ನಕ್ಕರು; ಬಾಷ್ಪಗಳನ್ನು ಸುರಿಸಿದರು.

* * * *

ಜಗನ್ನಾಥನ ಗೃಹಿಣಿಯು ಈಗ ದೇವಾಲಯಗಳಿಗೆ ಹೋಗುತ್ತಿರುವಳು. ಆದರೆ, ದೇವರು ಕೊಲೆಮಾಡಲ್ಪಟ್ಟಿರುವನೆಂಬ ಗುಟ್ಟು ಆಕೆಗೆ ಮಾತ್ರ ಗೊತ್ತು.



# ೫. ಪತ್ತೇದಾರ ಸಂಕಪ್ಪನವರು

## ಅವರ ಪರಿಚಯ.

ಅದೇ,-ಪತ್ತೇದಾರ ಸಂಕಪ್ಪ,-ಅವರ ಹೆಸರು ಅದೇ. ಇದ್ದ ಹೆಸರುಗಳು ಬಲುಬೇಗನೆ ಮಾಯವಾಗುವ ದೇಶ ನಮ್ಮದು. ಕದ್ದ ಹೆಸರುಗಳೇ ಮುದ್ದು ನಮಗೆ. ತೊಟ್ಟಿಲಿಗಿಡುವಾಗ 'ಶಂಕರ'ನೆಂದಿದ್ದ ಹೆಸರನ್ನು, ಮಗುವು ಅಂಬೆಗಾಲಿಡುವಾಗ 'ಚಂಕಪ್ಪ' ಎಂದು ಚಟ್ಟೆಯಾಗಿ ಬಡಿದು, ಕೌಮಾರಾವಸ್ಥೆಯಲ್ಲಿ 'ಸಂಕಪ್ಪ'ನೆಂದು ತಿರುಪಬೇಕಾದರೆ ಅದು ಕಾಲಲೀಲೆಯೋ ಮಗುವಿನ ಗ್ರಹಚಾರವೋ ಹೆಸರಿನ ದುರದೃಷ್ಟವೋ ಏನು? ಮಗು ಬೆಳೆದು, 21ನೇ ವಯಸ್ಸಿನಲ್ಲಿ ಮೆಟ್ರಿಕ್ ಪಾಸಾಗಿ,—'ಪಾಸಾದವರಿಗೇನು ಕೆಲಸವಿದೆ ಈ ದಿನಗಳಲ್ಲಿ'

ಎಸ್ನತ್ತ್ರ ಪೋಲೀಸ್ ಕೊನ್ಸ್‌ಟೇಬಲನಾಗಿ, ಆದೊಂದು ವರ್ಷ ವೆಲ್ಲೂರಿನ ಪೋಲೀಸ್ ತರಬೇತಿ ಶಾಲೆಗೆ ಚುನಾಯಿಸಲ್ಪಟ್ಟು, ಎರಡೇ ವರ್ಷಗಳಲ್ಲಿ ಜರತಾರಿಯ ಕೆಂಪು ರುಮಾಲು—ಖಾಕಿ ಚಲ್ಲಣಗಳಿಂದಿತ್ತ. ಉರುಳಿ, 'ಸಬ್‌ಇನ್ಸ್‌ಪೆಕ್ಟರ್' ಎಂದು ಜನರು ಕರೆವಷ್ಟರೊಳಗೆ ಒಂದು ದಿನ ಫಕ್ಕನೆ,—ವಾಚು ಕದ್ದವನೊಬ್ಬನನ್ನು ಗುಂಡಿಟ್ಟು ಸೆರೆಹಿಡಿದು ವಾಚು ಪತ್ತೆ ಮಾಡಿದ ಕ್ಷಣದಿಂದ 'ಪತ್ತೇದಾರ ಸಂಕಪ್ಪ' ಎನಿಸಿದುದೂ ಹೀಗೆಯೇ. ಖಾಸಗಿಯಾಗಿಯೇ ಇವರಿಗೆ ಪತ್ತೆ ಸಂಬ್ರಗಳು ದೊರೆಯಲಾರಂಭವೂ ಆಗಲೇ. ಪೋಲೀಸ್ ಇಲಾಖೆಯಲ್ಲಿದ್ದೂ ಖಾಸಗಿಯಾಗಿ ನಿರಾತಂಕವಾಗಿ ಹಣದ ರಾಶಿಯನ್ನೊಡ್ಡಲಾರೆನೆಂದು ಬಗೆದೋ ಏನೋ, ಇವರು ಕೆಲಸಕ್ಕೆ ರಾಜೀನಾಮೆ ಕೊಟ್ಟು, ಖಾಸಗಿ ಪತ್ತೇದಾರರೇ ಆದರು. ಈಗ 'ಸಬ್ ಇನ್ಸ್‌ಪೆಕ್ಟರ್ ಸಂಕಪ್ಪ' ಎಂದು ಕರೆವವರು ಕಡಿಮೆ. 'ಪತ್ತೇದಾರ ಸಂಕಪ್ಪ' ನೆಂದೇ ರೂಢಿಯ ಹೆಸರು. ಅವರ ಕಾರ್ಯಕ್ಷೇತ್ರವೂ ಪತ್ತೆ.

ನಿಮ್ಮ ಮನೆಯಿಂದ ಚಿಕ್ಕ ಮಗುವಿನ ಸ್ಲೇಟುಕಡ್ಡಿಯೊಂದು ಬೆಳಿಗ್ಗೆ ಕಳೆದು ಹೋಗಲಿ; ಪತ್ತೇದಾರ ಸಂಕಪ್ಪನವರಿಗೆ ತಿಳಿಸಿದರೆ ಸಾಕು. ಅಂದಿನ ಸೂರ್ಯನು ಮುಳುಗುವುದರೊಳಗಾಗಿ 30 ಮಾಪಿಳ್ಳೆ ಹುಡುಗರನ್ನೊ ಕ್ರೈಸ್ತರನ್ನೊ ಬ್ರಾಹ್ಮಣರನ್ನೊ ಮತ್ತಾರನ್ನೊ, ಕೈದುಮಾಡಿ, ಬೇಡಿ, ವಿಸಂತಿಸಿ, ಎಚ್ಚರಿಸಿ, ಗುದ್ದಾಡಿ, ಕಣ್ಣೀರು ಮಿಡಿದು, ಆ ಸ್ಲೇಟುಕಡ್ಡಿಯಂತಹ ಒಂದು ಕಡ್ಡಿಯನ್ನಾದರೂ ನಿಮಗೆ ತಂದೊಪ್ಪಿಸದೆ ಅವರು ಊಟಮಾಡರು. ನಿಮ್ಮ ವಾಚು ಹೋದರೆ ವಾಚು, ಉಂಗುರ ಹೋದರೆ ಉಂಗುರ, ಫೌಂಟನ್‌ಪೆನ್ ಹೋದರೆ ಫೌಂಟನ್‌ಪೆನ್,— ಮ್ಹಾಲಿಗೆ ಮ್ಹಾಲು ಸಿದ್ಧ! ಹೀಗಾಗಿ, ಊರಿನ ಸಜ್ಜನರಿಗೆ, ಇವರ ಹೆಸರು ತೆಗೆದಲ್ಲಿ ಮಹದಾನಂದ. ಸಂಕಪ್ಪನವರು ಈ ಸಜ್ಜನರನ್ನು ಎಲ್ಲಿ ಭೇಟಿಯಾಗುವರೋ ಅಲ್ಲಿ, ಆ ಸಜ್ಜನರ ಒಂದು ಸಾಮಾನು, ಆಗಲೇ—ಇದೇ ನಿಮಿಷದ ಮುಂಚೆ—ಕಳೆದುಹೋಗಿದೆ. ಬೀದಿಪೋಕರರು ಇವರನ್ನು ಕಂಡಲ್ಲಿ ಕೋಳಿಮರಿಗಳಂತೆ ಅತ್ತಿತ್ತ ಹಾರಿ ನಿಮಿಷಾರ್ಧದಲ್ಲಿ ಮಾಯ. ಶ್ರೀಮಾನ್ ಸೂರಪ್ಪನವರ ಗಡಿಯಾರವು ಕಳೆದು ಹೋದರೆ, ಅದು ಆ ಎಲ್ಲಯ್ಯನ ಕಿಸೆಯಲ್ಲಿರಬೇಕೆಂದು ಪ। ಸಂಕಪ್ಪನವರಿಗೆ ಕೂಡಲೇ ತಿಳಿಯುವುದು. ಮ। ರಾ। ರಾ। ಬಿ. ಬಿ. ಪ್ರಭುಗಳ ಜನಿವಾರಕ್ಕಿದ್ದ ಉಂಗುರವು ಹೋದುದನ್ನು ಇವರು ಸೌಭಾಗ್ಯವತಿ ಸುಂದರಿಬಾಯಿಯ ಮನೆಯಲ್ಲಿ ಆ ದಿನವೇ ಕಂಡುಹಿಡಿದಿದ್ದರು. ಶ್ರೀಯುತ ಶ್ಯಾಮಯ್ಯನ ನಾಯಿಮರಿಯನ್ನು ಸೆಕಂಡರಿ ಶಾಲೆಯ ಪಾಯಖಾನೆಯಲ್ಲಿ ಪತ್ತೆಮಾಡಿ, ಶಾಲಾಪೇದೆ ಸೋಮಯ್ಯನನ್ನು ನಾಯಿಮರಿಯನ್ನೆತ್ತುವಂತೆಯೇ ಕಿವಿಹಿಡಿದೆತ್ತಿ ಒಯ್ದು ತಂದು,—ಊರಲ್ಲಿ ನಾಯಿಮರಿಗಳು ಕಳವಾದರೆ ಸೋಮಯ್ಯನು ತಲೆಮರಸಿಕೊಳ್ಳುವಷ್ಟು ಪ್ರತಾರಣೆಯುಂಟುಮಾಡಿ ಶ್ವಾನರಕ್ಷಕರೂ ಆಗಿದ್ದರು.

ಇವರನ್ನು ಕಂಡಲ್ಲಿ ಕೇಡಿಗಳು ನಿಮಿಷಾರ್ಧದಲ್ಲಿ ಅತ್ಯಂತ ಶಾಂತಿಪ್ರಿಯರಾಗುವರು. ಗಡಂಗಿಗೆ ಹೋದರೆ ಕುಡಿಕರ ಉಸಿರಿಲ್ಲ. ಕಾಫಿ ಹೋಟೇಲಿಗೆ ಹೋದರೆ, ಮ್ಹಾಲಕನ ಉಬ್ಬಿದ ಎದೆ ಆರಂಗುಲ ಒಳಗೆ ಮುದುಡಿಕೊಳ್ಳುವುದು. ಮೀನುಮಾರ್ಕೆಟಿಗೆ ಹೋದರೆ ನಾಲ್ಕಡಿಯ "ಕಾಣೆ"ಯ ಕ್ರಯ ನಾಕಾಣೆ.

ಊರಲ್ಲಿ, ಶರದೃತುವಿನಲ್ಲಿ ನಾಟಕವಾಗುವುದಿದ್ದರೆ ಪ। ಸ। ರವರಿಗೆ ವಸಂತ ಋತುವಿನಲ್ಲೆ 'ಪಾಸ್' ಬರುವುದು. ಅಲ್ಲಲ್ಲಿ 'ಟೀಪಾರ್ಟಿ'ಯಾಗುವಾಗ ನಂಬ್ರ ೨ನೇ ಆಮಂತ್ರಣ ಪ। ಸ। ರವರಿಗೆ. ದಶಾವತಾರ ಮೇಳದವರು ಕಂಬ್ಳದಲ್ಲಿ ಆಟವಾಡಬೇಕಾದರೆ ಪ। ಸ। ರವರ ಎದೆಯೊಳಗಿಂದಲೇ ದಾಟಿ ಪ್ರಯಾಣಮಾಡಿ ಅಲ್ಲಿಗೆ ಮುಟ್ಟಬೇಕು. ನಿತ್ಯವೂ ಉಡುಪಿಗೆ ಹೋಗುವ ಬಸ್ಸುಗಳು ಇವರ ಕಾಲಡಿಯಿಂದಲೇ ಹೋಗುತ್ತವೆ. ಹಿಂದೆ ಪೋಲೀಸರನ್ನು ಕಾಣುತ್ತಲೇ, ಅವರನ್ನು ಕೆಣಕಲೆಂದೇ 'ವಂದೇಮಾತರಂ!' ಎಂದು ಕೂಗುತಿದ್ದ ಆ ಪೋರ ಸುಬ್ಬನು, ಇವರು ವೆಲ್ಲೂರಿನಿಂದ ಬಂದಂದಿನಿಂದ (ಇವರೀಗ ಪೋಲೀಸ್ ಇಲಾಖೆಯಲ್ಲಿಲ್ಲವಾದರೂ) "ನೀ ಬಂದೆ ನಾ ತಂದೆ ಏನೇನು ರಂಗಾ' ಎಂದು ಯದ್ವಾತದ್ವಾಗಿಯಾದರೂ ಬರೇ ಪುರಂದರದಾಸರ ಕೀರ್ತನೆಗಳನ್ನೆ ಹಾಡಿ, ತನ್ನ ಆ ಅಭ್ಯಾಸದ ಆಕಸ್ಮಿಕ ಆವೇಶವನ್ನು ಅಷ್ಟರಲ್ಲೆ ಮುಗಿಸುತ್ತಾನೆ. "ಮಹಾತ್ಮಾ ಗಾಂಧಿಕಿ ಜೈ" ಎಂದು ಕೂಗುತಿದ್ದ ಬಾಲಕರು ಈಗ ಇವರ ನೆರಳನ್ನು ಕಂಡಲ್ಲಿ ಫಕ್ಕನೆ ಕ್ರಿಕೆಟ್ ಆಟದ ನೆನಪಾಗಿ, ಕಳೆದ ವರ್ಷ ನರ್ಸಯ್ಯನು ಹೊಡೆದ 'ಸಿಕ್ಸರ'ನ್ನು ಚರ್ಚಿಸುತ್ತಾರೆ.

ಪ। ಸ। ರವರ ದೇಹದ ಗಾತ್ರವನ್ನು ಈ ತನಕ ಯಾರೂ ಅಳೆದಿಲ್ಲ. ಪೇಟೆಯಲ್ಲಿ ದೊರೆವ ಚಿಕ್ಕ "ಟೇಪು" ಇವರ ಮೈಯ ಸುತ್ತು ಬಾರದಷ್ಟು ಚಿಕ್ಕದು. ಕಲ್ಲುಕುಟ್ಟಿಗರ ದೊಡ್ಡ "ಟೇಪ"ನ್ನು ಇವರು–ಪ್ರತಿಷ್ಠೆಗೆ ಕುಂದೆಂದೋ ಗೌರವಕ್ಕೆ ಹಾನಿಯೆಂದೋ ಅಥವಾ "ಪತ್ತೆದಾರ"ನಾಗಿ ತನ್ನ ದೇಹದ ಗಾತ್ರದ ಗುಟ್ಟು ಕೊಡಲಾರೆನೆಂದೊ—ತಮ್ಮ ಮೈಯ ಹತ್ತಿರ ಬರಗೊಡಿಸರೆಂದು ಒಮ್ಮೆ ಇನ್ಶೂರ್ ಏಜಂಟನಿಗೆ ಇವರು ತಮ್ಮ ನಿಷೇಧ ತೋರಿಸಿದ್ದರಿಂದ ಸುಸ್ಪಷ್ಟ. ಇನ್ಶೂರ್ ಏಜಂಟನು ಕಣ್ಣು ಮುಚ್ಚಿ, ವಿಮಾ ಪತ್ರದ ಮೇಲೆ "ಎದೆಯ ಅಳತೆ=" ಎಂದಿದ್ದ ಸ್ಥಳದಲ್ಲಿ "8-" ಎಂದು ಬರೆದಿರುವನೆಂದು ಜನರ ಊಹೆ. ಅದು '8' ಅಲ್ಲವಾದರೆ '5' ಆಗಿರಲೂ ಬಹುದು. ಆದರೆ, '3' ಖಂಡಿತವಾಗಿ ಅಲ್ಲ. ಆ '8' ಅಥವಾ '5'ರ ನಂತರ ಎರಡನೆ ಅಂಕೆ ಯಾವುದೆಂದು ಯಾರೂ ನೋಡಿಲ್ಲ. ಇನ್ಶೂರ್ ಏಜಂಟನೊಡನೆ ಕೇಳಿದರೆ—ನಡುಗುವನು. ಭಾರವೆಷ್ಟೆಂದು ಕೇಳಿದರೆ—"ಮಿಯಾಂ ಸಾಹೇಬರ ಬಂಗ್ಲೆಯ ಗೇಟಿನ ಕಂಭದಷ್ಟು!" ಎಂದು ಏಜಂಟನ ವೈರಾಗ್ಯದ ಉತ್ತರ. ಆ ಕಂಭ

ವನ್ನು ಯಾರೂ ತೂಕ ಮಾಡುವಂತಹ ಸಾಹಸಕ್ಕೆ ಹೋಗದುದರಿಂದಲೂ ಆವಶ್ಯಕತೆ ಕಾಣದುದರಿಂದಲೂ ಅವರಿವರು 8 ಮಣದಿಂದ 11 ಖಂಡಿಯ ವರೆಗೆ ನಾನಾ ಬಗೆಯಾಗಿ ತಮತಮಗೆ ತೋರಿದಂತೆ ಹೇಳಿ ಜಗಳವಾಡಿಕೊಳ್ಳುವುದಿದೆ.

ಅವರ ಉದ್ದವನ್ನು ಅಳತೆ ಮಾಡುವುದು ಬಲು ಸುಲಭ;— "ರಾಮಪಾದುಕೆ" ಯಂತೆ! ನಿಮ್ಮ ಹತ್ತು ವರ್ಷದ ಮಗನನ್ನು ಅವರ ಸಮೀಪ ನಿಲ್ಲಿಸಿದರೆ ಆ ಮಗನ ತಲೆಯ ಕೂದಲು ಅವರ ತುಟಿಗೆ ಮುಟ್ಟುವುದು; ನೀವೇ ಹೋಗಿ ಅವರಿಗೆ ಹೊಂದಿ ನಿಂತರೆ ಅವರ ಮುಂಡಾಸಿನಿಂದ ನಿಮ್ಮ ಮುಖವೆಲ್ಲ ಮುಚ್ಚುವುದು. ಆ ಮೇಲೆ ನಿಮ್ಮ ಉದ್ದವೆಷ್ಟೆಂದು ಅಳತೆ ಮಾಡಿ, ಪ॥ ಸ॥ ರವರಿಗೆ ನೀವು ಮುಟ್ಟಿದುದೆಲ್ಲಿ ಎಂದು ಎಣಿಕೆ ಮಾಡಿದರಾಯಿತು.

ಪ॥ ಸ॥ ರವರ ಬಾಹುಗಳೂ ಕೈಗಳೂ . . . . ಅವುಗಳನ್ನು ನೀವು ಯಾವುದಕ್ಕೂ ಹೋಲಿಸ ಬಹುದು. ಯಾರಾದರೂ "ಪ॥ ಸ॥ ರವರ ಕೈಯಂತೆ!" ಎಂದು ಉಪಮಾರೂಪವಾಗಿ ಹೇಳಬೇಕಾದರೆ ಆ ಒಂದು ವಸ್ತುವು ಎಂಥದಿರಬೇಕೋ ಊಹಿಸುವುದು ಸುಲಭವಲ್ಲ. ಅವರು ಕೈಯಲ್ಲಿ ಹಿಡಿವ ಲಾಠಿಯನ್ನು ಮೂವರು ಬಡಗಿಗಳು ನಾಲ್ಕು ವರೆ ದಿನ ಕೆಲಸಮಾಡಿ ಸಿದ್ಧಗೊಳಿಸಿದ್ದರೆಂಬುದನ್ನೂ, ಆ ಬಡಗಿಗಳಿಗೆ ಸಂದ ಕೂಲಿಯ ವಿವರವನ್ನು ನೋಡದೆ ನಂಬಲಾರಿರಿ.

"ಸಂಕಪ್ಪ ಬಂದ!" ಎಂದರೆ ಮಕ್ಕಳಿಗೆ ಅಗ್ನಿಮಾಂದ್ಯ ಮಾಯ! ಒಂದೊಂದು ಕೇರಿಯಲ್ಲಿಯೂ 80ಕ್ಕೆ ಕಡಿಮೆಯಾಗದೆ ಮಕ್ಕಳು 'ಸಂಕಪ್ಪ ಬಂದ! ಎಂಬ ಹೆಸರಿನ ಗುಳಿಗೆ ಕೊಡುತ್ತಲೇ ಎಲ್ಲಿಯೂ ಇಲ್ಲದ ಹಸಿವನ್ನು ತಂದುಕೊಂಡು, ಮೂರು ದಿನಗಳಿಗೆ ಸಾಕಾಗುವ ಅನ್ನವನ್ನುಂಡಾದರೂ 'ಸಂಕಪ್ಪ' ಎಂಬುದರಿಂದ ಹೊರಟ ಕಳವಳದ ಸಂಕಟವನ್ನು ನೀಗಿಕೊಳ್ಳುವುವು. ವೃದ್ಧರೆಲ್ಲ ಹೇಳುವರು——"ಸಂಕಪ್ಪನಿರುವುದೊಬ್ಬ; ಇನ್ನೊಬ್ಬ ಸಂಕಪ್ಪನು ಈ ಯುಗದಲ್ಲಿ ಹುಟ್ಟಲಾರನು" ಎಂದು (–ಎಂಬ ಈ ಆಶ್ವಾಸನೆಯಿಂದಲೇ ಪ್ರಜಾಕೋಟಿಯು —ವಿಶೇಷವಾಗಿ ಮಕ್ಕಳು ಮತ್ತು ಬೀದಿ ಪೋರರು—ಜೀವನದಲ್ಲಿ ಪೂರ್ಣವಾಗಿ ನೈರಾಶೆಯನ್ನು ಕಂಡಿಲ್ಲ.) ಹಾಗೆಲ್ಲಿಯಾದರೂ ಹುಟ್ಟಿದರೆ, ವರ್ಷಕ್ಕೆ ಐದಂಗುಲದಂತೆ ಅಡಿಗೊತ್ತಿಕೊಂಡು ಸಂಕೋಚಿಸುವ ಭೂಮಾತೆಯು 50ಕ್ಕೆ ಪ್ರಗತಿಹೊಂದಿರುವಳೆಂದು ಗಣಿತಜ್ಞರ ಗಾಬರಿಯ ಪ್ರಕಟಣೆಯಾಗುವುದೆಂದು ನಿರೀಕ್ಷೆ.

600 ಮಂದಿ ಪೋಲೀಸರಿರುವ ನಮ್ಮೂರಲ್ಲಿ ಸಂಕಪ್ಪನೆಂದರೆ ಪ್ರತಿಯೊಂದು ಗೋಳಿ ಮರಕ್ಕೂ ಗೊತ್ತು; ಊರಲ್ಲಿದ್ದ ಗೋಳಿ ಮರಗಳೆಲ್ಲ ಸಂಕಪ್ಪನವರಿಗೆ ಗೊತ್ತು. ಸಂಕಪ್ಪನವರು ಹೋಗದ ಕೇರಿಯಿಲ್ಲ. ಮುನಿಸಿಪಾಲಿಟಿಯವರು ದಿಸಕ್ಕಾರರಂತೆ ಹೊಸಕೇರಿಗಳನ್ನು ರಚಿಸಿದದೂ ಇವರು ಅಲ್ಲಿ ತಿರುಗದೆ

ಬಿಡುವವರಲ್ಲ. ಯಾರ ಹಿತ್ತಿಲಲ್ಲಿ ಎಷ್ಟು ಹೊಂಡಗಳಿವೆ, ಯಾವ ಕೆರೆಗಳು ಆತ್ಮ ಹತ್ಯೆಗೆ ಅನುಕೂಲವಿವೆ, ಇದನ್ನೂ ಬಲ್ಲರು ಈ ಪ. ಸ. ರವರು. ನಮ್ಮ-- ನಿಮ್ಮ-ಅವರ-ಇವರ-ಮಗದೊಬ್ಬರ—ಎಲ್ಲರ-ಮನೆ ಮಾಡು, ಅವುಗಳಿಗಿರುವ ಪಕ್ಕಾಸು, ರೀಪು, ಹಂಚು, ಎಲ್ಲವೂ ಇವರಿಗೆ ಚೆನ್ನಾಗಿ 'ಕಣ್ಣುಪಾಠ'. ಇಂಪೀರಿಯಲ್ ಬ್ಯಾಂಕಿಗೆ ಕಿಟಕಿಗಳೆಷ್ಟು, ಬಾವಟೆ ಕಂಭಕ್ಕೆ ಮೆಟ್ಟಲುಗಳೆಷ್ಟು, ನೇತ್ರಾವತಿ ಸಂಕಕ್ಕೆ ತೊಲೆಗಳೆಷ್ಟು, ಇಷ್ಟನ್ನೂ ಹೇಳಬಲ್ಲರು. ಈ 'ಪೊಂಟ್ಯೆಕ್'' ವೈಕುಂಠರಾಯರದು, ಆ 'ಎಸ್ಕ್ರಿನ್'' ವಿಃಸ್ಕಿತರದು, ಆ 'ಶೆವರ್ಲೆಟ್'' ಶಿವರಾಯರದು,– 'ಬೇಬಿ' ಗೋಪಾಲರಾಯರದು, 'ಪಪ್ಪಾ' . . . . ('ಪಪ್ಪಾ' ಇಲ್ಲ, ಕ್ಷಮಿಸಿರಿ!) 'ಓಕ್ಲೆಂಡ್'' ಮತ್ತಾಯಸರದು, 'ಬ್ಯೂಕ್'' ವಿಕ್ರಮರಾಯರದು,— ಹೀಗೆ ಮೊಟಾರುಗಳನ್ನೂ ಅವುಗಳ ಮಾಲ್ಹಕರನ್ನೂ ಬಲ್ಲರು!—ಬಣ್ಣವನ್ನೂ ಬಲ್ಲರು!—ವೇಗ, ಕೊಂಡುಕೊಂಡ ತಾರೀಕು,—(ಏನಿದು! ಉತ್ಪ್ರೇಕ್ಷೆಯೆಂದು ಬೇಸರಿಸಬಾರದು.) ಎಲ್ಲವನ್ನೂ ಬಲ್ಲರು. ಪತ್ತೇದಾರರಾಗಬೇಕಾದರೆ ಇಷ್ಟೆಲ್ಲ 'ಕ್ವಾಲಿಫಿಕೇಶನ್ಸ್' ಬೇಡವಾದರೂ.... ಇದ್ದರೆ ದೋಷವೇನು?

ಸಂಕಪ್ಪನವರು ನಗುವುದು ಅಪರೂಪ. 'ನಗು' ಎಂಬ ಶಬ್ದವನ್ನೇನೋ ಅವರು ಕೇಳಿತುವರಾದರೂ, ನಗುವನ್ನು ಕಂಡಿರುವರಾದರೂ, ಅವರು ನಗುವುದೆಂದಿಲ್ಲ. 'ಸುರೆ' ಎಂಬ ಶಬ್ದವನ್ನು ನೀವು ಬಲ್ಲಿರಿ; ಆದರೆ, ಕುಡಿಯಬೇಕೆ?--ಎಂದೊಂದು ತತ್ವ. ನಗುವೆಂದರೆ ಸುರೆಯಷ್ಟೇ ಕೆಟ್ಟುದೆಂದು ಅವರ ಅಭಿಪ್ರಾಯ. ಮೂರ್ಖರೂ ಮಕ್ಕಳೂ ಮಾತ್ರ ನಗುವರೆಂದು ಅವರು ಆಗಾಗ ಹೇಳುವುದಿದೆ. ಅವರು ಮೂರ್ಖರೂ ಅಲ್ಲ, ಮಗುವೂ ಅಲ್ಲ; ಆದಕಾರಣ ನಗರು. "Laugh & grow fat" ಎಂದು ಆಂಗ್ಲೇಯರ ಗಾದೆ; ಆದರೆ, ಅದನ್ನು ಅವರ ಮುಂದೆ ಹೇಳಿ ನೋಡಿ. ನಮ್ಮ ವಾತಾವರಣಕ್ಕೆ ನಗುವಿನಷ್ಟು ವಿನಾಶಕಾರೀ ಅಭ್ಯಾಸವು ಮತ್ತೊಂದು ಇಲ್ಲವೆಂದು ನಿಮ್ಮ ಎದೆ ಸೀಳಿಹೋಗುವಂತೆ ಅರ್ಧ ತಾಸು ಭಾಷಣ ಕೊಟ್ಟು, ನಿಮ್ಮಲ್ಲಿದ್ದ ನಗುವನ್ನೆಲ್ಲ ಹೀರಿ ತೆಗೆದು, ನಡೆದುಬಿಡುವರು. ನೀವು ಹಟವಾದಿಗಳಾಗಿದ್ದು ಒಪ್ಪದಿದ್ದರೆ, "ನೋಡಯ್ಯ ನನ್ನನ್ನ! ಹುಟ್ಟಿದಂದಿನಿಂದ ನಗದೆ ಹೀಗೆ ಬೆಳೆದಿದ್ದೇನೆ!" ಎನ್ನುವರು. ಯಾವ ದೇಹಪ್ರಕೃತಿ ಶಾಸ್ತ್ರಜ್ಞನೂ ಕೇಳಿ, ಮೂರ್ಛೆ ಹೋಗಬೇಕು. ನೀವು ನಿರುತ್ತರರಾಗಬೇಕಾಗುವುದು. ಏಕೆಂದರೆ, ನೀವೆಷ್ಟು ಸ್ಥೂಲಕಾಯರಾಗಿರಬಹುದಾದರೂ ಪ. ಸ. ರವರ ಮುಂದೆ ನಿಂತರೆ "ಲೋರಿ"ಯ ಮುಂದೆ "ಸೈಕಲ್" ಇಟ್ಟಂತೆ! ಇಲ್ಲ, ಅವರು ನಗುವುದಿಲ್ಲ. ನಕ್ಕರೆ, ನಗುವು ಆ ವ್ಯಕ್ತಿಗೆ ಒಪ್ಪದು.

ಹಾಗೆಂದು, ಅವರು ಅಳುವರೋ ಎಂದು,–ನಗಲಾರದ ವ್ಯಕ್ತಿಯು ಅಳುವ ಶರ್ತದಲ್ಲಾದರೂ ಜೀವಿಸಿರಬೇಕೆಂಬ

ತತ್ತ್ವಪ್ರತಿಪಾದಕರಾದ ನೀವು ಕೇಳಬಹುದು. ಇಲ್ಲ;--ಸಣ್ಣ ಮಗುವಾಗಿರುವಾಗಲೂ ಅಳಲಿಲ್ಲ. ನಗುವೂ ಅಳುವೂ ಇಲ್ಲದ ವಿಚಿತ್ರ ಮಗುವೆಂದೇ ತಾಯಿಗೆ ಆಶ್ಚರ್ಯ. ತೊಟ್ಟಿಲು ಆಗಾಗ್ಗೆ ಘಡಕ್ಕೆಂದು ಉತ್ಪಾದದ ಸೂಚನೆ ಕೊಡುವುದರಿಂದಲೂ, ತೊಟ್ಟಿಲಿನ ಸರಪಣಿಗಳು ಝುಣಝುಣೆಂದು ಕೋಲಾಹಲಮಾಡುವುದರಿಂದಲೂ ಆಕೆ ಮಗುವು ಸಜೀವವಾಗಿರುವುದೆಂದು ಧೈರ್ಯಮಾಡಿಕೊಳ್ಳುತಿದ್ದಳಂತೆ.

ನಗುವುದು ಮೂರ್ಖರೂ ಮಕ್ಕಳೂ ಆದರೆ, ಅಳುವುದು ಹೇಡಿಗಳೂ ಹೆಂಗಸರೂ ಎಂದು ಅವರೆನ್ನುವರು. ಒಮ್ಮೆ ಇವರು, ಒಂದು ಅವಘಡದಲ್ಲಿ (ಇವರು ಮೂರಂಗುಲ ಹೆಚ್ಚಾಗಿ ಬದಿಗೊರಗಿದುದರಿಂದಲೇ ಅವಘಡವಾಯಿತೆಂದು 'ಡ್ರೈವರ'ನು ಪ್ರಮಾಣಮಾಡುತ್ತಾನೆ!)—ಬಸ್ ಅವಘಡದಲ್ಲಿ, ಗದ್ದೆಗೆ ಉರುಳಿದಾಗ ಒಂದು ಕೂಗು ಕೇಳಿಬರಲು, ಪ। ಸಂ।ರವರು ಕೂಗುವರೆಂದು ಬೆರಗಾಗಿ ಜನರು ಓಡಿ ಬಂದು ನೋಡಿದ್ದಲ್ಲಿ,-- ಪ। ಸಂ।ರವರು ವೀರ ಅಭಿಮನ್ಯುವಿನಂತೆ ಮಲಗಿದುದನ್ನೂ ಅಭಿಮನ್ಯುವಿನ ಕೆಳಗೆ ಚಿಕ್ಕ ಮಾನವ ಕೀಟವೊಂದು ಒದ್ದಾಡುವುದನ್ನೂ ಕಂಡು, ಅರಚಿದವರು ಪ। ಸಂ।ರವರಲ್ಲವೆಂದು ತಿಳಿದು ಬಂತು.

ಅವರ ಧ್ವನಿ?—ನಿಶ್ಚಯವಾಗಿಯೂ ಅದು ಗಾಯನಕ್ಕೆಂದು ಹುಟ್ಟಿದುದೇ ಅಲ್ಲ;—ಕೇವಲ ಅಪ್ಪಣೆ ಕೊಡಲಿಕ್ಕೆ ಮತ್ತು ಗದರಿಸಲಿಕ್ಕೆ. ಪತ್ತೆದಾರರಿಗೆ ಬೇಕಾದ ಧ್ವನಿಯೇ ಅದು. "ಏನಯ್ಯಾ, ಊಟವಾಯಿತೇ?" ಎಂದು ಯಾರನ್ನಾದರೂ ಮಮತೆಯಿಂದ ಪ್ರಶ್ನಿಸುವಾಗಲೂ, ಆ ಮನುಷ್ಯನು ಊಟಮಾಡಿದುದು ತಪ್ಪೆಂದೇ ಕೋಪದಿಂದ ಪ್ರಶ್ನಿಸುತ್ತಿರುವರೋ ಎಂಬ ಧಾಟಿಯೇ ನಿಮಗೆ ಕೇಳುವುದು.

ಪ। ಸಂ।ರವರ ಮೂಗು ಸಣ್ಣದು; ಕಣ್ಣು ಸಣ್ಣದು; ಬಾಯಿಯೂ ಸಣ್ಣದು.

ಪ। ಸಂ।ರವರ ವಾಹನವೆಂದರೆ ಸೈಕಲು; ಎರಡೇ ಚಕ್ರಗಳದ್ದು. ಮೂರು ಚಕ್ರಗಳ ಸೈಕಲ್ಲಿನಲ್ಲಿ ಸವಾರಿ ಮಾಡಬೇಕೆಂದು ಇವರಿಗೆ ಡಾಕ್ಟರರ ಸಲಹೆ. ಆದರೆ, ತಾನೇನು ಮಗುವಲ್ಲವೆಂದು ಪ। ಸಂ।ರವರು ಚೆನ್ನಾಗಿ ಬಲ್ಲರು. ತನ್ನ ದೇಹರಕ್ಷಣೆಯನ್ನೂ ಬಲ್ಲರು. ಅವರ ಎರಡು ಚಕ್ರಗಳ ಸೈಕಲ್ ಅಂದರೆ ಜಾಪಾನ್ ಸೈಕಲ್ ಅಲ್ಲ, ತಿಳಿದಿರಲಿ! ಅಂತಹ ಸೈಕಲಿನಲ್ಲಿ ಕುಳಿತು ಅವರು ಮೂರು ಫರ್ಲಾಂಗ್ ಹೋಗುವುದರೊಳಗೆ ಸೈಕಲ್ಲು ಬಗ್ಗಿ, ಒತ್ತಿ ಕಾಲಂಗುಲ ದಪ್ಪದ ಒಂದು ತಗಡಾದೀತು. ಏನೋ ವಿಶೇಷ ಮೆಶೀನಂತೆ. ಘಂಟೆಗೊಮ್ಮೆ ಚಕ್ರಗಳಿಗೆ ಗಾಳಿಹಾಕುವುದರಿಂದೂ, 15 ದಿನಕ್ಕೊಮ್ಮೆ "ಟಾಯರ್‌ಟ್ಯೂಬ್"ಗಳನ್ನು ಬದಲಾಯಿಸುವುದರಿಂದಲೂ ಆ 'ವಿಶೇಷತ್ವವು" ಕುಲದ ಮರ್ಯಾದೆಯನ್ನೂ ಪ। ಸಂ।ರವರ ಪ್ರಾಣವನ್ನೂ ಉಳಿಸಿದೆ. ಅವರು ಆ 'ವಿಶೇಷ'ವನ್ನೇರಿ, ಕೈಕಾಲುಗಳನ್ನು ಆಡಿಸುತ್ತ ಬರುವಾಗ ಮಾರ್ಗದ ಇಕ್ಕಡೆಗಳಲ್ಲೂ ಜನರ ಕೋಲಾಹಲ,

ತಪ್ಪಿಸಿಕೊಳ್ಳಲಿಕ್ಕೆ! ಒಂದಿಷ್ಟು ಅಜಾಗ್ರತೆಯಾದರೆ ನೀವು ಸೈಕಲಿನ ಕೆಳಗೆ; ಪ. ಸ. ರವರು ನಿಮ್ಮ ಮೇಲೆ. ಪ. ಸ. ರವರು ಮೈಮೇಲೆ ಬಿದ್ದರೆ, ಪುನಃ ಎದ್ದು ಗುಣಹೊಂದುವವರು ಅವರೊಬ್ಬರೇ. ಗುಣಹೊಂದಿದ ಮೇಲೆ, ಅಂದು ತನ್ನ ಕೆಳಗೆ ಮಲಗಿದವರು—(ನಿಜವಾಗಿಯೂ ಅವರು ಉದ್ದೇಶಪೂರ್ವಕವಾಗಿ ಮಲಗಿದವರು!)—ಬದುಕಿರುವರೆಂದು ಕೇಳಿದರೆ, ಅವರ (ಬಿದ್ದವರ) ಮೇಲೆ ಚಾರ್ಜು ಇದೆ; ಸತ್ತರೆ, "ಅಪಘಡದಿಂದ ಸತ್ತನು" ಎಂದು ಸಹಜವಾದ ತೀರ್ಪು.

ಇಂತಿದು, ಪತ್ತೆದಾರ ಸಂಕಪ್ಪನವರ ಕಿಂಚಿತ್ ಪರಿಚಯ.

## ಅವರು ಮಾಡಿದ ಪತ್ತೆ.

ಅದೊಂದು ದಿನ: ಜಗತ್ತು ಎಚ್ಚರವಿತ್ತು; ಪ. ಸ. ರವರು ನಿದ್ರಿಸುತಿದ್ದರು!

ಪ. ಸ. ರವರು ಕನವರಿಸುತ್ತಿರಬಹುದು. ಎಂತಹ ಕನಸೆಂದು ಊಹಿಸುವುದು ಸುಲಭವಲ್ಲ. ಯಾರನ್ನಾದರೂ ಗುದ್ದಾಡಿ ಸೆರೆಹಿಡಿದ, ಅಥವಾ ಯಾರಾದರೂ ಇವರನ್ನೆ ಗುದ್ದಾಡಿ ಚರಂಡಿಗೆ ಒಗೆದ ಕನಸಿರಬಹುದು. ಅಷ್ಟರಲ್ಲಿ, ಆರ್ತನಾದವೊಂದು ಅವರಿಗೆ ಎಚ್ಚರವನ್ನುಂಟು ಮಾಡಿತು. ಪ. ಸ. ರವರು ತೋಫಿನಿಂದ ಹೊಡೆಯಲ್ಪಟ್ಟ ಗುಂಡಿನಂತೆ,— ತಾವು ಮಲಗಿದ ಆರಾಮು ಖುರ್ಚಿಯಿಂದ ದಡಮ್ಮನೆ ಹಾರಿದರು.

ಎದುರಿಗೆ ಗೋಡೆ, ಎಡಬದಿಗೆ ಅಂಗಳ, ಬಲಬದಿಗೆ ಬಾಗಿಲು, ಹಿಂದಿನಿಂದ ಹಿತ್ತಿಲು ಕಾಣುವ ಕಿಟಕಿ. ಪ. ಸ. ರವರು ಕಣ್ತೆರೆದಿದ್ದಾರೆ,—ಆದರೆ ಯಾರೂ ಎಲ್ಲಿಯೂ ಕಾಣಿಸರು. ಅವರ ಮೊದಲನೆ ತೀರ್ಮಾನವೆಂದರೆ,—ಆರ್ತನಾದವು ತನ್ನಿಂದಲೇ ಹೊರಟುದಾಗಿರಬೇಕೆಂದು; ಎರಡನೆ ತರ್ಕವೆಂದರೆ,—ಆ ಕೂಗಿನಲ್ಲಿ ತಮ್ಮ ಅರ್ಧಾಂಗಿಯ ಕಂಠವನ್ನವರು ಗುರುತಿಸಿದಂತೆ ಭಾಸವಾಗುವ ಕಾರಣ, ಅಡಿಗೆಕೋಣೆಯಲ್ಲಿಯೋ ಹಜಾರಿನಲ್ಲಿಯೋ ಕೊಲೆಯಾಗಿರಬೇಕೆಂದು. ಅಷ್ಟರಲ್ಲಿ, "ಓಃ" ಎಂದು ಪುನಃ ಯಾರೋ ಕೂಗಿದರು. ಅದರೊಂದಿಗೆ ಆ ಕೂಗಿನ ಯಂತ್ರ—ಸೌಭಾಗ್ಯವತಿ ರತ್ನಾಬಾಯಿ—ಪ. ಸ. ರವರ ಅರ್ಧಾಂಗಿ— ತೇಲುತ್ತ ಅತ್ತ ಬಂದುದನ್ನು ನೋಡಿದರು. ಪ. ಸ. ರವರ ಎದೆಯೊಳಗಿನ ಭಯದ ತಂತಿ ಠಿಣ್ ಎಂದಿತು:

"ಲಿಲ್ಲಿ ಇಲ್ಲ!"

"ಲಿಲ್ಲಿ ಇಲ್ಲ?"—ಎಂತಹ ವಿದ್ಯುತ್ಪಾತ!

ಪ. ಸ. ರವರು ಕಂಗಾಲಾದರು. ಲಿಲ್ಲಿ ಎಂದರೆ ಪ. ಸ. ರವರ ಒಬ್ಬಳೇ ಮಗಳು, ಇನ್ನೂ ಚಿಕ್ಕ ಮಗು. "ರತ್ನಾ, ಎಲ್ಲಿ ಹೋದಳು?" ಎಂದು ಕೇಳಿದರು.

"ಸುಮಾರು ಅರ್ಧ ತಾಸಾಯಿತು. ಮಧ್ಯಾಹ್ನ ಊಟ ಬಡಿಸಿದ್ದೇನೆ. ಉಂಡಿದ್ದಾಳೆ. ಅಂಗಿಹಾಕುವೆನೆಂದು ಕರೆವಾಗ—ಇಲ್ಲ!"

"ಇಲ್ಲ? ಇಲ್ಲ?—ಎಲ್ಲಿಗೆ ಹೋದಾಳು?"

"ನಾನೇ ಹೇಳಬೇಕೆ?"

"ಇಲ್ಲ, ನಾನೇ ಹುಡುಕುವೆನು!" ಎನ್ನುತ್ತ ಪ. ಸ. ರವರು ದಡಮ್ಮನೆ ಅಂಗಳಕ್ಕೆ ನೆಗೆದರು!

ಮನೆ ಮುಂದೆ ಸರಕಾರಿ ಬಾವಿ; ಅದರಲ್ಲಿ ಇಣಿಕಿದಾಗ ಲಿಲ್ಲಿ ಕಾಣಿಸಲಿಲ್ಲ. ಅಲ್ಲಿಂದ ಏಳು ಹಜ್ಜೆ ಮುಂದೆ ಹೋದರೆ ವೀರಪ್ಪನ ಬೀಡಿ ಅಂಗಡಿ; ಅಲ್ಲಿಯೂ ಲಿಲ್ಲಿ ಇಲ್ಲ. ಅದನ್ನು ದಾಟಿದರೆ ಫೆರ್ನಾಂಡಿಸರ ಮನೆ; ಗೇಟಿನ ಒಳಗೆ ಹೊಕ್ಕಿ ಐದು ಹಂದಿಗಳ ಬೆನ್ನಮೇಲೆ ಕಾಲಿಟ್ಟು, ಕೋಲಾಹಲವನ್ನುಂಟು ಮಾಡಿ ಮುಂದುವರಿದು, ಇಪ್ಪತ್ತರ ರಮಣಿಯೊಬ್ಬಳೊಡನೆ "ಲಿಲ್ಲಿ ಬಂದಿರುವಳೇ?" ಎಂದು ಪ್ರಶ್ನಿಸಿದಾಗ, ಆಕೆ ವಿಸ್ಮಯಗೊಂಡು, ಮಹಾ ವಿಕಟಸ್ವರದಲ್ಲಿ "ಡೋಂಟ್ ನೋ" ಎನ್ನುತ್ತ ನಕ್ಕಳು. ಪ. ಸ.ರವರ ಎದೆಯನ್ನು ತಿವಿದಂತಾಯಿತು. ಮುಂದೆ ವಕೀಲ ಆವೇಶರಾಯರ ಆಫೀಸು. ಅವರಿಗೆ ಎರಡು ತಿಂಗಳ ಹಿಂದೆ ಕಕ್ಷಿಗಾರಳೊಬ್ಬಳ ಮಗು ಮೇಜಿನ ಮೇಲೆ ಶಾಯಿ ಚೆಲ್ಲಿದಂದಿನಿಂದ ಎಲ್ಲ ಮಕ್ಕಳ ಮೇಲೆ ಹಗೆಯಂತೆ!–ಅಲ್ಲಿ ಲಿಲ್ಲಿ ಇರಲಾರಳು. ಅದರಾಚೆ ಇಸ್ಮಾಯಿಲ್ ಸಾಹೇಬರ ಚಾ ಹೊಟೇಲು. ಹೋಟಲಲ್ಲಿ ಮೂವರು ಮಾಪಿಳ್ಳೆಯರೇ. ಆ ಮೇಲೆ ಕುವಲಿಯಾ ಲೋಜ್; ಅದು ಚಿಕ್ಕ ಮಕ್ಕಳಿಗೆ ದುರ್ಭೇದ್ಯ. ಮುಂದುವರಿದರೆ ಮುನಿಸಿಪಲ್ ಶಾಲೆ. ಅಲ್ಲಿ, ಅಳದೆ ಮಕ್ಕಳು ಪ್ರವೇಶಿಸುವವರಲ್ಲ. ಅಲ್ಲಿಂದ ಮುಂದೆ ಹೋಗುವಾಗ ನಾಗಯ್ಯನ ಕಾಫಿಕ್ಲಬ್; ಅಲ್ಲಿ ದೊಡ್ಡವರಿಗೂ ಪ್ರವೇಶಿಸುವಾಗ ಉಬ್ಬಸವಾಗುವಷ್ಟು ಹಿಂಡು. ಅದರೆದುರು ಚಿಕ್ಕ ದಿಣ್ಣೆ; ದಿಣ್ಣೆಯ ಮೇಲೆ ಶಂಭುರಾಯ—ವಕೀಲ.

ಶಂಭುರಾಯರು ವಕೀಲ ವೃತ್ತಿಯಿಂದ ನಿವೃತ್ತರಾಗಿದ್ದರೂ "ಬಿ. ಎ. ಬಿ. ಎಲ್." ಎಂದು ಬರೆದಿರುವ ಹಲಗೆಯ ಮೇಲಿನ ವ್ಯಾಮೋಹ ಬಿಡಲಾರದೆ ಅದನ್ನು ಬರಿದಾಗಿರುವ ಎರಡು ಬಾಸರ್ೋಪು ಪೆಟ್ಟಿಗೆಗಳ ಮೇಲೆ ಹಾಸಿ, ದಿನಕ್ಕೆರಡು ತಾಸು ಅದರಲ್ಲಿ ಮುಂಡಿಸುತ್ತ, ತನ್ನ ಪೂರ್ವಾಶ್ರಮದ ಪುಣ್ಯಕಾರ್ಯಗಳನ್ನು ಮೆಲುಕು ಹಾಕುತಿದ್ದಂತೆ ಹಿಗ್ಗಿ, ಉಬ್ಬಿ, ಆ ಹಲಗೆಯಲ್ಲಿ ಕೊಂಚ ಉರುಳಾಡಿ ದಣುವಾರಿಸಿಕೊಳ್ಳುತಿದ್ದರು. ಇನ್ನು ಕಿವಿಯಿಂದೇನು ಪ್ರಯೋಜನವೆಂದೆಣಿಸಿದರೆಂಬಂತೆ,—'ರಿಟಾಯರ್' ಆಗುವಾಗ ಕಿವಿಗಳೊಂದಿಗೇ ರಿಟಾಯರ್ ಆಗಿ, ಅಪ್ರತಿಮ ಕಿವುಡರೆನಿಸಿ, ಅಳಿಯನ ಸ್ನೇಹಿತರು ಬಂದು, 'ಭಾಸ್ಕರನಿರುವನೇ?' ಎಂದು ಕೇಳಿದಾಗ 'ಮೂರು ಘಂಟೆ ಏಳು ನಿಮಿಷ!' ಎಂದು ಉತ್ತರಕೊಟ್ಟು; "ಇನ್ನು ಇಲ್ಲಿ ಗಂಟೆ ಕೇಳಲು ಬರಬಾರದಯ್ಯ!" ಎಂದು ಗದರಿಸಿ "ಸೀರಿಯಸ್" ಎನಿಸಿದ್ದರು. 'ಗಂಟೆ ಅಲ್ಲ,—ಭಾಸ್ಕರ!' ಎಂದು ಗಟ್ಟಿಯಾಗಿ ಅರಚಿದರೆ, 'ಮಿಸ್ಕಿತರಾರೆಂದು ಅವರೊಡನೇ ಕೇಳಿರಿ—ಡೆವಿಟ್!' ಎನ್ನುತ್ತ ತನ್ನ ಬಾಸರ್ೋಪ್ ಪೆಟ್ಟಿಗೆಗಳ

ಮೇಲೊಂದು ಗುದ್ದು ಹೊಡೆದು, ಭಾಸ್ಕರನ ದುರ್ಭಾಗಿ ಮಿತ್ರನು ಪಲಾಯನ ಮಾಡಿ ಅರ್ಧ ಘಂಟೆ ಕಳೆದರೂ ಗಂಟೆ ಮತ್ತೆ ವಿಸ್ಮಿತರ ಮೇಲೂ ರೋಷ ಕಳೆಯಲಾರದೆ ನಡುಗುತಿದ್ದರು. ಈ ಪುಣ್ಯ ಪುರುಷರ ಅಂಗಳಕ್ಕೆ ಪ। ಸ।ರವರ ಆಗಮನವಾಯಿತು.

ಪ। ಸ।ರವರ ಮುಖವೆಲ್ಲವೂ ಇಷ್ಟರಲ್ಲೇ ನೇರಳೆಬಣ್ಣಕ್ಕೆ ತಿರುಗಿತ್ತು. ಬೆವರು ಧಾರಾಕಾರರಾಗಿ ಸುರಿದು, ಬಿಗಿಯಾಗಿ ಉಟ್ಟ ಚಲ್ಲಣ, ತೊಟ್ಟ ಅಂಗಿ, ಇವುಗಳನ್ನು ಪೂರ್ಣ ಒದ್ದೆಮಾಡಿತ್ತು. ದಿಣ್ಣೆಯ ಮೇಲೆ, ರಾಯರ ಮನೆಯ ಗೇಟಿನ ಬಳಿ ಹಸುರ ಬಳ್ಳಿಯೂ, ಅದರ ಮೇಲೆ ಕೆಂಪಗಿನ ಹೂವುಗಳೂ ಕಂಡುದೇ ಪ। ಸ।ರವರು ಆ ದಿಣ್ಣೆ ಹತ್ತಲು ಕಾರಣ. ಲಿಲ್ಲಿಗೆ ಕೆಂಪಗಿನ ವಸ್ತುಗಳನ್ನು ಕಂಡರೆ ಪ್ರಾಣ. ಅದಕ್ಕೆ ಪ। ಸ।ರವರ ಕೊಳೆಯಾದ ಕೆಂಪಗಿನ ಮುಂಡಾಸೇ ಸಾಕ್ಷಿ. ಮನೆ ಬಿಟ್ಟು ಬಂದ ಲಿಲ್ಲಿಯು ಈ ಕೆಂಪು ಹೂಗಳಿಂದ ಆಕರ್ಷಿತವಾಗಿ ನೆಟ್ಟಗೆ ಇಲ್ಲಿಗೆ ಹತ್ತಿರ ಬಾರದೇಕೆಂದೇ ಅಖಂಡ ಮಿದುಳಿನ ಪ। ಸ।ರವರ ತರ್ಕ.

ಲಿಲ್ಲಿ ವಿರಹದಿಂದ ಬಂದ ಪ। ಸ। ರವರು ಇನ್ನೊಂದು ಗಳಿಗೆಯಲ್ಲಿ ಮೆಟ್ಟಲು ಹತ್ತುವವರು; ಅಷ್ಟರಲ್ಲೇ ನಾಯಿಯ ಬೊಗಳಾಟ ಕೇಳಿಸಿತು;— ಅವರ ಕಾಲಬುಡದಲ್ಲೇ— ಮೆಟ್ಟಲಲ್ಲಿ ನಾಲ್ಕಡಿಯ ಮಹಾಕರಾಳ ಪ್ರಾಣಿ! ಬೊಗಳಿದುದು ಬಾಯಿಂದಲೇ, ಸಂದೇಹವಿಲ್ಲ. ಹಲ್ಲುಗಳೂ ಇವೆ; ಕಾಲುಗಳೂ ಉಗುರುಗಳೂ ಇವೆ.

“ಏನು? ಯಾರಯ್ಯಾ, ಈ ನಡುಮಧ್ಯಾಹ್ನ?”ಎಂದರು ಶಂಭುರಾಯರು. ಜಗುಲಿಯ ಮೇಲೆ ‘ಬಿ. ಎ. ಬಿ. ಎಲ್.’ ಹಲಗೆಯ ಮೇಲೆ ಕುಳಿತ ಅವರಿಗೆ ನಾಯಿ ಬಗುಳಾಟ ಕೇಳಿದಂತಾಗಿ ಸಮಾಧಿ ಭಂಗವಾಗಿತ್ತು.

ಪ। ಸ। ರವರು ಜಗಲಿಯ ಮೇಲೆ ದೃಷ್ಟಿಯೆಸೆದು ನೋಡಿದರು. ಯಾರೂ ಕಾಣಿಸಲಿಲ್ಲ. ಪ್ರಶ್ನಿಸಿದುದು ನಾಯಿಯಲ್ಲವೆಂದು ಅವರು ಪ್ರಮಾಣ ಮಾಡಬಲ್ಲರು. ನಾಯಿ ಇನ್ನೂ ಬೊಗಳುತ್ತಲೇ ಇತ್ತು. ವೆಲ್ಲೂರಿನ ಕೊಲೇಜಿನಿಂದ ಬಂದಂದಿನಿಂದ ರಾಮಾಯಣಕಾಲದ “ಆಕಾಶವಾಣಿ”ಯಲ್ಲಿ ಅವರು ನಂಬುವವರಲ್ಲ. “ಯಾರಾದರೇನು? ಪ್ರಶ್ನೆಗೆ ಉತ್ತರ ಕೊಟ್ಟರೆ ಬಾಧಕವೇನು?” ಎಂದುಕೊಳ್ಳುತ್ತ, ಬೊಗಳುವ ನಾಯಿಯನ್ನೂ ಮರೆಯಲಾರದೆ ಒಪ್ಪಂದದ ದೃಷ್ಟಿಯಿಂದದನ್ನು ನೋಡುತ್ತ, “ನಾನು! ಲಿಲ್ಲಿಯನ್ನು ಹುಡುಕಿ ಬಂದಿದ್ದೇನೆ” ಎಂದು ಆ ಅಶರೀರವಾಣಿಗೆ ಉತ್ತರ ಕೊಟ್ಟರು.

“ನೆಲ್ಲಿ ಇಲ್ಲಿಲ್ಲವಯ್ಯಾ!” ಎಂದಿತು, ಅಶರೀರವಾಣಿ.

“ನೆಲ್ಲಿ ಅಲ್ಲ,–ಲಿಲ್ಲಿ, ಲಿಲ್ಲಿ!” ಎಂದು ಅರಚಿದರು ಪ। ಸ। ರವರು. ಹಾಯ್! ಆ ಶಬ್ದವೆಲ್ಲಿಂದ ಬರುತ್ತದೆಯೆಂಬುದನ್ನು ಪತ್ತೆಮಾಡಲು ಈ ನಾಯಿ ಬಿಡಲೊಲ್ಲದು! ನಾಯಿಯ ಮೇಲಿನ ದೃಷ್ಟಿಯನ್ನು ತೆಗೆದರೆ . . . . ಏಕೆ ಅಥವಾ ಹೇಗೆ ಅವರು ತೆಗೆಯಬೇಕು?

"ಅಲ್ಲಿ ಅಲ್ಲಿ" ಎಂಬುದಕ್ಕೆ ಅಶರೀರ ವಾಣಿಯಿಂದಲೇ ಉತ್ತರ ಬಂತು: "ಜಿಲ್ಲಿ? ನಮ್ಮ ನಾಯಿ?" ಎಂದು.

ಪ। ಸ। ರವರು ಕಳವಳದಿಂದ "ಅಹುದು, ನಿಮ್ಮ ನಾಯಿ, ಬಗುಳುತ್ತಿದೆ, ಸ್ವಲ್ಪ ಹಿಂದೆ ಕರೆದು ಬಿಡಿರಿ!" ಎಂದರು.

"ನಿಜ, ಚುರುಕೆಂಬುದು ನಿಜ; ರೆಡ್‌ಬರ್ನರು ಜಡ್ಜರಾಗಿದಾಗ ಒಂದು ಮರಿ ಕೊಟ್ಟಿದ್ದರು! ಇಂತಹ ನಾಯಿ ಈ ಊರಲ್ಲಿ ಇದೊಂದೇ!" ಎಂದಿತು ಅಶರೀರವಾಣಿ.

"ಇಂತಹ ಪಾಷಾಣಹೃದಯಿಯೊ ಕಿವುಡರು ಇವರೊಬ್ಬರೇ! ಹಾಳಾಗಿ ಹೋಗಲಿ!" ಎಂದು ಮನಸ್ಸಿನಲ್ಲೆ ಶಪಿಸಿ, ಪ। ಸ। ರವರು, ಉದ್ವೇಗದಿಂದ ಕೂಗಿದರು: "ನಿಜ ಸ್ವಾಮಿ! ಎಲ್ಲಿರುವಿರಿ ನೀವು?—ಚೆನ್ನಾಗಿ ಬೊಗಳುತ್ತಿವೆ—ಇತರ ನಾಯಿಗಳಂತಲ್ಲ—ಗಂಭೀರ ಸ್ವರ—ಕರೆಯಿರಿ, ಕರೆಯಿರಿ ಹಿಂದಕ್ಕೆ—ಅದಕ್ಕೆ ನನ್ನ ಸ್ನೇ...ಟರರರರಲ್‌....."

ನಾಯಿಯ ಬಗುಳಾಟವು ಆಕಸ್ಮಿಕವಾಗಿ ನಿಂತು, ಅದು "ಘರಕ್‌" ಎನ್ನುತ್ತ ತನ್ನ ನಿಷೇಧಸೂಚಕ ಭಾಷಣವನ್ನು ಮುಗಿಸಿ, ಪ। ಸ। ರವರ ಅಜೇಯಮೈಗೆ ಹಾರಿತ್ತು!

"ಏನಯ್ಯಾ ಮಾತಾಡುವುದಿಲ್ಲ?" ಎಂದಿತು, ಪುನಃ ಅಶರೀರವಾಣಿ.

"ರೊರೊರೊರೊರೊsss! – ಬ್ರಬ್ರ ಬ್ರಬ್ರಬ್ರಬ್ರ!!! ಬಳಕ್‌! ಚುಚುಚ್ಚು!—ರಾಸ್ಕರರರಲ್‌!—ಸ್ವಾಮಿ!!—"

ಶಂಭುರಾಯ (ಅಶರೀರ ವಾಣಿಯ ಯಜಮಾನ)ರಿಗೆ "ರೊರೊರೋ––ಬ್ರಬ್ರ ಬ್ರ" ಎಂಬುದರ ಅರ್ಥವೇ ತಿಳಿಯಲಿಲ್ಲ. ಅದು, ಪ್ರಪಂಚದಲ್ಲಿನದೊಂದು ವ್ಯಾವಹಾರಿಕ ಭಾಷೆಯಾಗಿದ್ದರೆ ಗ್ರಂಥಸ್ಥವಲ್ಲವೆಂದೂ, ನಗರಗಳಲ್ಲಿ ಪ್ರಚಾರದಲ್ಲಿಲ್ಲವೆಂದೂ ಹೈಕೋರ್ಟಿನ ಮುಂದಾದರೂ ವಾದಿಸಲು ಹಿಂಜರಿಯರವರು. ಅಂತಹ ನಿಗೂಢ ಭಾಷೆ ಏನಿದು ಎಂದೂ, ಅದ ನ್ನಾಡುವ ಪಂಡಿತರು ಯಾರಿವರೆಂದೂ ನೋಡಲು – ಬಾರ್ಸೋಪು ಪೆಟ್ಟಿಗೆ ಮೇಲಿನ ಹಲಗೆಯಿಂದೆದ್ದು, ಸಾವಕಾಶವಾಗಿ ಹಜ್ಜೆಗಳನ್ನಿಡುತ್ತ, ಜಗುಲಿಯ ತುದಿಗೆ ಬಂದರು. ಬಂದು, ನೋಡುತ್ತಾರೆ,—ಖಾಕಿ ಚಲ್ಲಣವನ್ನುಟ್ಟುಕೊಂಡ ಭೀಮಾಕಾರನೊಬ್ಬನನ್ನು ಜಿಲ್ಲಿಯು ಆಲಿಂಗಿಸಿ, ಚುಂಬನದ ಮಳೆಗರೆಯುತ್ತಿರುವಳು! ಹಲ್ಲುಗಳೂ ಉಗುರುಗಳೂ ಮೈಯೊಳಗೆ ಅರ್ಧಂಗುಲದಂತೆ ಹೂಳುವ ಆ ಚುಂಬನವಿಧಾನದಲ್ಲಿ ಔಚಿತ್ಯವೇನನ್ನೂ ಕಾಣದೆ ಪ। ಸ। ರವರು ವಿಕಾರವಾಗಿ "ರೊರೊ – ಬ್ರಬ್ರ" ಎನ್ನುತ್ತ ಕಾದಾಡುತ್ತಿರುವರು!

"ಜಿಲ್ಲಿಜ್ಜಿಲ್ಲಿಜ್ಜಿಲ್ಲಿಜ್ಜಿಲ್ಲಿಜ್ಜಿಲ್ಲಿ!" ಎಂದು ಕೂಗಿದರು,- ಶಂಭುರಾಯರು,—ಜಗಲಿಯಿಂದಲೇ! ಪ। ಸ। ರವರು, ಕಾದ್ದಾಟದ ಆ ಮಹಾಕ್ಷಣದಲ್ಲಿಯೂ ಆ ಅಶರೀರ ವಾಣಿಯ ಯಂತ್ರವಾವುದೆಂದು ನೋಡುವ ಕುತೂಹಲದಿಂದ ಆ ಕಡೆ ನೋಡಿದರು. ಅಗಲವಾದ ಹಣೆಯ, ಚೂಪಾದ ಮೂಗಿನ, ಕುಚೇಷ್ಟೆಯ ನಗುವಿನ,

ನಯವಾದ ಕ್ಷೌರದ ಮುಖದ, ನೇರಾದ ದೇಹದ ವ್ಯಕ್ತಿಯೊಂದು ಜಗುಲಿಯ ಮೇಲೆ ನಿಂತಿದೆ. ಮಹಾ ನಿಷ್ಠೂರ ಹೃದಯದವನೆಂದು, ದೃಷ್ಟಿ ಮಾತ್ರದಿಂದ ಊಹಿಸಬಹುದು. ಇವರೇ ಶಂಭುರಾಯ ರೆಂದು ಪ। ಸ। ಶವರು ಕೂಡಲೇ ಗುರು ತಿಸಿ, "ಸಸಸಸಸ್ವಾಮಿೞ, ಜಿಲ್ಲಿ, ಕರೆ ಯಿರಿ!" ಎಂದು ಕೂಗಿದರು.

"ಜಿಲ್ಲಿಲ್ಲಿಲ್ಲಿಲ್ಲಿಲ್ಲಿಲ್ಲಿ!" ಎಂದರು ಪುನಃ ಶಂಭುರಾಯರು. ತಮ್ಮ ಮುಂದೆ ನಡೆ ಯುತ್ತಿರುವ ಮಹಾಕದನವನ್ನು ನೋಡಿ ಅವರ ಹೃದಯದಲ್ಲಿ ಏರಿಳಿತಗಳಾವುವೂ ಇರಲಿಲ್ಲ. ರುಸುಂ ತೆಗೆದುಕೊಳ್ಳದೆ ಆಡುವ ಮಾತೂ ಮಾಡುವ ಕೆಲಸವೂ ಆದಕಾರಣ, ಅದಕ್ಕಿಂತ ಹೆಚ್ಚಿಗೇನನ್ನೂ ಅವರು ಮಾಡರೆಂಬುದು ಖಂಡಿತ.

ಪ। ಸ।ರವರು ರೌದ್ರಾವೇಶ ತಾಳಿ ದರು. ಖಾಸಗಿ ಪತ್ತೆದಾರನೊಬ್ಬನು, ತನ್ನ ಹೆಂಡತಿಯ ಅಥವಾ ತನ್ನ ಏಕ ಮಾತ್ರ ಮಗಳನ್ನು ಹುಡುಕಿ ಬಂದಾಗ, ಮುಂದಿಯ ಮನೆಯ ನಾಯಿಗಳಿಗೆ ಬಗ ಳುವ ಕೆಲಸವೇನು? ಅಂತಹ ನಾಯಿ ಗಳು, ತಮ್ಮ ಮುಂದಿರುವವನ ಸ್ಥಾನ ಗೌರವವನ್ನೂ ದೇಹದ ಮಹತ್ವವನ್ನೂ ತಿಳಿಯದೆ ಅವಿವೇಕತನದಿಂದ ಮೈ ಮೇಲೆ ಹಾರಿದಾಗ, ಯಜಮಾನನು ಜಿಡಿಸಲು ಬಾರದೆ, ಜಗುಲಿಯ ಮೇಲೆ ತಣ್ಣಗೆ ನಿಂತು, ಎರಡು ಟೊಳ್ಳು ಮಾತು ಗಳನ್ನಾಡುವುದೆಂದರೇನು?—

—"ಕರೆಯಿರಯ್ಯ ಹಿಂದಕ್ಕೆ! ಅದಕ್ಕೆ ನನ್ನ ಸ್ನೇಹವಿಲ್ಲ!" ಎಂದು, ತನ್ನ ಶ್ವಾಸಕೋಶಗಳಿಂದ ಸಾಧ್ಯವಿದ್ದಷ್ಟು ಗಾಳಿಯನ್ನು ಹೊರಡಿಸಿ, ಗರ್ಜಿಸಿದರು.

ಆದರೆ, ರಾಯರು ನಕ್ಕರು. "ರೆಡ್ ಬರ್ನರು . . . ." ಎಂದು ಪುನಃ ಆರಂ ಭಿಸುತ್ತಲೇ,-'ಬ್ಲೆಕ್‌ಬ್ರಾನ'ರಾದ ಇವರು ಅವರನ್ನಪ್ಪಿ ಮಸಿಯಾಗಿ ಹೋಗಲೆಂದು ಶಪಿಸಿ, ಯಾವುದೋ ಒಂದು ಕಸರತ್ತನ್ನು ನೆನಪಿಗೆ ತಂದು, ನಾಯಿಯನ್ನು ಝಾಡಿಸಿ ಐದಡಿ ದೂರಕ್ಕೆ ಒಗೆದು, ಇನ್ನು ನಾಯಿ ಯನ್ನೂ ಅದರ ಯಜಮಾನನನ್ನೂ ಖಂ ಡಿತ ನಂಬಲಾರದೆ,—'ಇದೇ ಅಡಿಗಶ್ವ ಮೇಧಫಲ!' ವೆನ್ನುತ್ತ ದಡಮ್ಮನೆ ದಿಣ್ಣೆ ಯಿಂದ ಕೆಳಕ್ಕೆ ಹಾರಿದರು. 'ಮರಿಯಿಟ್ಟ ಮೇಲೆ ಒಮ್ಮೆ ಬನ್ನಿರಿ!' ಎಂದು ರಾಯರು ಏನೇನೋ ಉಪಚಾರದ ಮಾತುಗಳನ್ನಾ ಡುತಿದ್ದಂತೆ, 'ಬಾಣಂತಿಯಾಗುವ ಮೊದಲೇ ಆ ಜಿಲ್ಲಿ ಸಾಯಲಿ!' ಎಂದು ಎರಡನೆ ಶಾಪಕೊಟ್ಟು, ಎರಡನೆಕಂತಾಗಿ ಮೇಲ್ದಿಣ್ಣೆಯಿಂದ ಕೆಳದಿಣ್ಣೆಗೆ ಹಾರಿ ದರು. ಆಗಲೂ ಬಗುಳಾಟ ಕೇಳಿಸಲು, ಹಿಂದೆ ನೋಡುವಾಗ, ಜಿಲ್ಲಿಯು ಮೇಲ್ದಿ ಣ್ಣೆಯ ಮೇಲೆ ನಿಂತು ರಣದ ಚಿಹ್ನೆ ತೋರುವುದು ಕಾಣಿಸಿತು.

ಪ। ಸ।ರವರ ಮೊದಲನೆ ಆಲೋಚ ನೆಯೆಂದರೆ— ಓಡೋಣವೆಂದು. ಆದರೆ, ಮರುಕ್ಷಣಕ್ಕೆ, ಸರಕಾರಿ ಸ್ಥಳಕ್ಕೆ ನೆಗೆದು ನಿಂತ ಪತ್ತೆದಾರನನ್ನು ಕದಲಿ ಸಲು ಯಾವ ನಾಯಿಗೂ ಅಧಿಕಾರವಿಲ್ಲ ವೆಂದು ಹೊಳೆಯಲು,-ಅದನ್ನು ತಿಳಿಯದೆ ಜಿಲ್ಲಿಯು ಇನ್ನೂ ಬಗಳುತ್ತಿರುವುದು ಕ್ಕಾಗಿ ಅವರಿಗೆ ಕೋಪ ನೆತ್ತಿಗೇರಿತು.

ಪ। ಸ।ರವರು ಮೈ ಮರೆತರು; ಕೈ ಮುಷ್ಟಿ ಕಟ್ಟಿದರು; ಜಿಲ್ಲೆಯ ಕಡೆಗೇ ನೋಡುತ್ತ, ಕೈಮುಷ್ಟಿಗಳನ್ನು ವಾತಾವರಣವಲ್ಲಿ ಆಡಿಸಿ, 'ತೋರಿಸುತ್ತೇನೆ ನಿನಗೆ ಕತ್ತೆರಂಡೆ!' ಎಂದು ಒಯ್ದು, ಸರಕ್ಕನೆ ತಿರುಗಲು,—

—ಚಿಕ್ಕದಿಣ್ಣೆಯ ಬದಿಯ ಹಸಿ ಮಣ್ಣು ಜಾರಿತು! ಪ। ಸ।ರವರ ದೇಹವು ದಢಲ್ಲೆಂದು ಹದಿಮೂರು ಆಳದ ಚರಂಡಿಗೆ ಬಿತ್ತು!

* * *

ಪ। ಸ।ರವರು ಕಣ್ತೆರೆದುದು ಅವರ ಮನೆಯಲ್ಲೇ. ರತ್ನಾಬಾಯಿಯು ಅವರ ಬಳಿ ಕುಳಿತು ಅಳುತಿದ್ದಾಳೆ! ಲಿಲ್ಲಿ ಅಲ್ಲೆ ಸ್ವಲ್ಪ ಮುಂದೆ ಆಡುತಿದ್ದಾಳೆ! ತಮ್ಮ ಮೈಗೆ ಸುಮಾರು ಹನ್ನೊಂದು ಕಡೆಗಳಲ್ಲಿ ಬಿಳಿಬಿಳಿ ವಸ್ತ್ರಗಳನ್ನು ಸುತ್ತಿರುವರು!

"ರತ್ನಾ—ಇವಳು ಲಿಲ್ಲಿಯೇ? ನಮ್ಮ ಲಿಲ್ಲಿಯೇ?" ಎಂದು ಪ। ಸ। ರವರು ಗದ್ಗದ ಕಂಠದಿಂದ ಕೇಳಿದರು.

"ದೇವಾ, ಇವರಿಗೆ ಮೂರ್ಛೆ ಬರುವಂತೆ ಮಾಡಿದೆ!" ಎಂದು ದೇವರನ್ನು ದೂಷಿಸುವ ದನಿಯಲ್ಲಿ ವಂದಿಸುತ್ತ ರತ್ನಾಬಾಯಿಯು ಪತಿರಾಜನ ದಪ್ಪಗಿನ ಗಲ್ಲವನ್ನು ಸವರುತ್ತ,—"ಅಯ್ಯೋ—ನಿಮಗಿನ್ನೂ ಚಿತ್ತವು ಸ್ವಸ್ಥಾನಕ್ಕೆ ಬಂದಿಲ್ಲವೇ? ಇದು ನಮ್ಮ ಮಗುವಲ್ಲವೇ?" ಎಂದು ಬಿಕ್ಕಿಬಿಕ್ಕಿ ಅತ್ತಳು.

"ನಾನೇ ಪತ್ತೆ ಮಾಡಿದೆನೇ? ಇನ್ನಾರು ತಂದರು ಈಕೆಯನ್ನು?" ಎಂದು ಪ। ಸ।ರವರು ಭ್ರಾಂತಿಗೊಂಡು ಪ್ರಶ್ನಿಸಲು,—

—"ಪತ್ತೆಗೆ ಹೊರಟ ನೀವು ಈ ಸ್ಥಿತಿಯಲ್ಲಿ ಮರಳಿ ನನ್ನ ಎದೆಯನ್ನು ಕರಗಿಸಿದುದು ಸಾಲದೆ, ಹೀಗೆ ಹುಚ್ಚು ಬಟ್ಟೆ ಪ್ರಶ್ನಿಸಿ ನನ್ನನ್ನು ಕಳವಳಿಸುತ್ತಿರುವಿರಲ್ಲಾ!" ಎಂದು ರತ್ನಬಾಯಿಯು ರೋದಿಸಿದಳು.

"ಹಾಗಾದರೆ, ರತ್ನಾ! ಲಿಲ್ಲಿ ಎಲ್ಲಿ ದೊರೆತಳು?" ಎಂದು ಪ। ಸ। ರವರ ಅಚ್ಚರಿಯ ಪ್ರಶ್ನೆ.

"ಕಳೆದು ಹೋದರಲ್ಲವೇ ದೊರೆವುದು? ಆಕೆ, ನಿಮ್ಮ ಕೋಣೆಯಲ್ಲಿ, ನಿಮ್ಮ ಕುರ್ಚಿಯಲ್ಲಿ ಕುಳಿತು, ಮೇಜಿನ ಮೇಲಿನ ಶಾಯಿ ಕುಪ್ಪಿಯನ್ನು ತೆರೆದು ಆಡುತಿದ್ದಳು! ನೀವು ಇಲ್ಲಿಂದ ಹೊರಟು ಹೋದ ನಂತರವೇ ನನಗೆ ದೊರೆತಳು!" ಎಂದು ರತ್ನಾಬಾಯಿ ವಿವರಿಸಿದಳು.

ಪ। ಸ। ರವರಿಗೆ 30 ನಿಮಿಷ ಉಸಿರು ಕಟ್ಟಿತು. 31ನೇ ನಿಮಿಷದಲ್ಲಿ ಕಣ್ತೆರೆದು, "—ರತ್ನಾ, . . . ನಿನ್ನಾಣೆ . . . . ಕೋಪಗೊಳ್ಳಬೇಡ! – ನಾನು ಈ ದಿನ ಒಂದು ದೊಡ್ಡ ಪತ್ತೆಮಾಡಿದೆ. . ."

"ಏನದು?" ಎಂದು ಪ್ರಶ್ನಿಸಿದಳು ಸೌಭಾಗ್ಯವತಿ.

ಆಕೆಯ ಕಂಠಸ್ವರವನ್ನವರು ಮೆಚ್ಚಲಿಲ್ಲ. "ಹೆಂಗುಸರ ಮಾತನ್ನು ಕೇಳಿ ವಿಚಾರವಿಲ್ಲದೆ ದುಡುಕಬಾರದೆಂದು!" ಎಂದು ಉತ್ತರ ಹೇಳುವುದರಲ್ಲಿದ್ದರು. ಆದರೆ, ಈಕೆಯೊಡನೆ ಇನ್ನೂ

ಸಂಸಾರಮಾಡಿ ಉಳಿಯ ಬೇಕಾದರೆ ಮಾತಿನ ಕುದುರೆಗೆ ಲಗಾಮು ಬೇಕೆಂಬ ಪತ್ರೆಯನ್ನು ಮಾಡಿ,—“ನಾನು ಮಾಡಿದ ಪತ್ರೆ ಇಷ್ಟೆ:—ಪತ್ರೆ ಮಾಡಬಾರದ ಸ್ಥಳದಲ್ಲಿ ಮಾಡಬಾರದೆಂದು!” ಎಂದು ಉತ್ತರವಿತ್ತರು.

“ಇನ್ನು ಮಾಡಬೇಡಿ!” ಎಂದು ಮಡದಿ ಬುದ್ಧಿವಾದ ಹೇಳಿದಳು.



# ೬. ದಿವ್ಯಪ್ರೇಮ

“ಉಡ್ಪಿ ಉಡ್ಪಿ ಕಾರ್ಕಳ ಕಾರ್ಕಳ ಗುರುಪೂರ್!”

ನನ್ನ ಹೆಂಡತಿಗೆ ನಿತ್ಯವೂ ಹೊಟ್ಟೆನೋವು. ಹೆರಿಗೆಯ ನೋವಲ್ಲವೆಂದು, ನಮ್ಮೂರ “ಡಾಕ್ಟರ್ನಿ” ಹೇಳಿದ್ದಳು. ನಿಜವಾಗಿರಬೇಕು. ಇಲ್ಲದಿದ್ದರೆ, ಕಳೆದೇಳು ವರ್ಷಗಳಿಂದಲೂ, ನಿತ್ಯವೂ ಈ ಬಗೆಯ ನೋವಿದ್ದಾಗ ಆಕೆ ಒಂದೇ ಒಂದು “ಕುಲದೀಪ”ವನ್ನು ಪ್ರಸವಿಸಿರುತಿದ್ದಳೇ? ಏಳು ವರ್ಷಗಳಿಂದ ಹೊಟ್ಟೆನೋವನ್ನು ನಿಲ್ಲಿಸಿಕೊಳ್ಳಲಾರದವಳನ್ನು ಇನ್ನು ಮನೆಯಲ್ಲಿಟ್ಟುಕೊಳ್ಳುವ ಸೈರಣೆ ತಪ್ಪಿ, ಕಾವಿವಸ್ತ್ರವನ್ನುಟ್ಟು ಶಂಕರಾಚಾರ್ಯನಾಗಿ ಅದ್ವೈತಮತಪ್ರಚಾರಕ್ಕೆ ಹೊರಡೋಣವೆನಿಸುತಿತ್ತು. ಆ ನೋವನ್ನು ನಿಲ್ಲಿಸಲು ಔಷಧಬೇಕೆಂದು ಅದೇ ಡಾಕ್ಟರ್ನಿ ಹೇಳಲು, ಅದನ್ನು ತರಲು ನಾನೇ ಬೇಕೆಂದಾಯಿತು. “ಮದ್ದಿನ ವಾಕ್” ಎಂದು ಆರಂಭಿಸಿದೆ. ನಿತ್ಯವೂ, ಬೆಳಗ್ಗೆ ಏಳು ಗಂಟೆಗೆ (ಕೆಲವೊಮ್ಮೆ ಮುಖ ತೊಳೆಯದೆ) ಮದ್ದಿಗೆ ಹೊರಡುವುದೇ. ತಿಂಗಳಿಗೆರಡು ಅಕ್ಕಿ ಮುಡಿಬೇಕಾಗಿರುವಂತೆ ಈ ಮದ್ದೂ ಅವಶ್ಯ. ಹಾಗೆ ಹೋಗುತಿದ್ದಾಗ, ಹಂಪನಕಟ್ಟೆಯಲ್ಲಿ ಈ ಮೇಲಿನ ಕೂಗು ಕೇಳುತಿದ್ದುದು. ನಿಮಗೂ, ಕೆಲವು ರಸ್ತೆಗಳಲ್ಲಿ ಕೇಳಬಹುದು.

ಆ ಕೂಗಿನ ಅಭ್ಯಾಸವಾಗಿತ್ತು. ಲಕ್ಷ್ಯಗೊಡದೆ ಮುಂದರಿದೆನು. ಅಷ್ಟರಲ್ಲೆ ಭೂಕಂಪವಾದಂತಾಯಿತು. “ಸ್ವಾಮೀ ಮೂರಾಣೆ—ಇಲ್ಲಿ” ಈ ಮೂರೇ ಶಬ್ದಗಳು ಕೇಳಿದವು. ಭೂಮಿಯೂ ನಾನೂ ನಡುಗಿದೆವು ದಿಗ್ಭ್ರಾಂತನಾಗಿ ಕಣ್ಮುಚ್ಚಿದೆ. ಕಣ್ತೆರೆದಾಗ, ನಾನು ಬಸ್ಸಿನಲ್ಲೂ, ಬಸ್ಸು ಪದವುಗೇಟಿನಬಳಿಯಲ್ಲೂ ಇದ್ದೆವು! ದಿಂಡ ಏಜಂಟನು ನನ್ನನ್ನು ಬಸ್ಸಿಗೆ ಎತ್ತಿ ಹಾಕಿದ್ದನು. “ಉಡುಪಿಗೇ ಅಲ್ಲವೇ?—ಮೂರಾಣೆ ಕೊಡಿ!” ಎನ್ನುತ್ತ ತನ್ನ ಕೈಯನ್ನೂ ಚಾಚಿದ್ದನು.

“ನನಗೆ ಉಡ್ಪಿಗೆ ಹೋಗಬೇಕಾಗಿಲ್ಲ!” ಎಂದು ನಿಷೇಧಸೂಚಕಧ್ವನಿಯಲ್ಲಿ ಹೇಳಿದೆ.

"ಮತ್ತೇಕೆ ಬಸ್ಸು ಹತ್ತಿದ್ದಿರಿ?—ಮೂರಾಣೆ ಅಲ್ಲವೇ? ಇನ್ನಾವಾಗ ಉಡುಪಿಗೆ ಹೋಗುವಿರಂತೆ? ಕೊಡಿರಿತ್ತ ಮೂರಾಣೆ!" ಎಂದು ಬಸ್ಸು ಏಜಂಟನು ಕಣ್ಣು ಕೆರಳಿಸಿದನು.

ಅಯ್ಯೋ! ಈ ಹೆಂಡತಿಯನ್ನು ಬಿಟ್ಟು ಶಂಕರಾಚಾರ್ಯರ ಅನುಯಾಯಿಯಾದರೆ . . . .

"ಮೂರಾಣೆ ಬೇಕಾದರೆ ಕೊಡುವೆನು. ಆದರೆ, ಉಡುಪಿಗೆ ಖಂಡಿತ ಬರುವುದಿಲ್ಲ. ನನ್ನ ಹೆಂಡತಿ—ಏಳು ವರ್ಷ—ಹೊಟ್ಟೆನೋವು. . ." ಎಂದು ಬಾಯ್ತೆಗೆದೆ.

"ಓ ಶಂಕರಾ! ಏನಂತೆ ಇವ? ಏಳು ವರ್ಷದ ಹೆಣ್ಣನ್ನು ವಿವಾಹವಾಗಿದ್ದಾನಂತೆ—ಆಕೆಗೆ ಹೊಟ್ಟೆನೋವಂತೆ!—ಶಾರದಾ ಮಸೂದೆ ಸತ್ತಿತೇ?" ಎಂದು ನನ್ನ ಹಿಂದಿನ ಸೀಟಿನಿಂದ ಕ್ರಾಪ್ ಬಾಚಿದ 20 ವರ್ಷದ ಚಿಕ್ಕ ಮಗುವೊಂದು ಅರಚಿತು. ಆ ಮಗುವಿನೊಂದಿಗೆ 28ರ ತರುಣಿಯೊಬ್ಬಳು ಕುಳಿತು ಕಿಲಕಿಲನೆ ನಗುತ್ತಿದ್ದಳು. ಬಹುಶಃ "ಮಗು"ವಿನ ಹೆಂಡತಿ.

"ಹೆಂಡತಿಗೆ ಅಲ್ಲಯ್ಯಾ ಏಳು ವರ್ಷ—ಆಕೆಯ ಹೊಟ್ಟೆನೋವಿಗೆ; ತಿಳಿಯಿತೆ? ಮತ್ತು, ಶಾರದಾ ಮಸೂದೆಯೂ ಸತ್ತಿಲ್ಲ—ಸತ್ತುದು ಅದನ್ನುಲ್ಲಂಘಿಸುವವರ ಆತ್ಮಗಳು.—ತಿಳಿಯಿತೆ?" ಎಂದೆ.

"ಉಡುಪಿಗೆ ಒಬ್ಬರು ಸಾಧುಗಳು ಬಂದಿರುವರಂತೆ—ಭಾರೀ ಸಾಧುಗಳು. ಅವರ ಪ್ರಾಯ ಅವರಿಗೇ ತಿಳಿದಿಲ್ಲ. ಇನ್ನೂರಾಗಿರಲೂ ಬಹುದು; ಮುನ್ನೂರಾಗಿರಲೂ ಬಹುದು." ಎಂದು, ನನ್ನ ಎಡದಲ್ಲಿ ಕುಳಿತ ಒಂದು ಹುಳ ನುಡಿಯಿತು. ಆ "ಹುಳ"ದ ತಲೆಗೆ ಬಲು ಚಿಕ್ಕ ಮುಂಡಾಸೂ, ಅದರ ಕೆಳಗೆ ಬಲು ಚಿಕ್ಕ ಮುಖವೂ, ಮುಖದ ಕೆಳಗೆ ಬಲು ಚಿಕ್ಕ ದೇಹವೂ ಇದ್ದುವು.

ನಾನು—"ಹ್ಞಾ ಹ್ಞಾ?" ಎಂದು ಆಶ್ಚರ್ಯದಿಂದ ಕೇಳಲು,—

"ಅಂತು ನೂರಲ್ಲ ಅಥವಾ ಐವತ್ತಲ್ಲ . . . ." ಎಂದು ಮುಂದರಿಸಿತು ಆ ಹುಳ.

". . . . ವಿಶೇಷ?"

"ವಿಶೇಷವೆಂದರೆ ಆ ಭಾರೀ ಸಾಧುಗಳೊಡನೆ ಭಾರೀ ಮದ್ದುಗಳಿವೆ. ಸೆಟ್ಟಗೆ ಹಿಮಾಲಯದಿಂದಲೇ ಆರಿಸಿ ತೆಗೆದುವು. ಸತ್ತವರನ್ನೂ ಬದುಕಿಸಬಲ್ಲರಂತೆ ಆ ಸಾಧುಗಳು! ಆದರೆ, ಅವಕ್ಕೆ ಇನ್ನೂ ಸರಕಾರದ ಅಜ್ಞೆ ದೊರೆತಿಲ್ಲವಾದ್ದರಿಂದ ಸಾಯದವರಿಗೆ ಮಾತ್ರ ಈಗ ಕೊಡುತ್ತಿರುವರು. ನೋಡಿ ಒಂದು ಕೈ. ನಿಮ್ಮ ಹೆಂಡತಿಯ ಹೊಟ್ಟೆನೋವಿಗೊಂದು ಔಷಧ ಇಲ್ಲವುಂಟೇ?" ಎಂದಿತಾ ಹುಳ.

"ಅಹುದು ಸ್ವಾಮಿ. ಹೆಂಗಸರಲ್ಲವೆ? ಪಾಪ—ಪಶುಗಳಂತೆ.—ಒಂದು ಘಂಟೆ ನನಗೆ ಹೊಟ್ಟೆನೋವಾದರೆ, ಕಣ್ಮುಚ್ಚಿ, ಯಾರನ್ನೂ, ಯಾವುದನ್ನೂ ನೋಡಲೊಲ್ಲದೆ, ಆಹಾರ ತೆಗೆದುಕೊಳ್ಳದೆ, ಉಯಿಲು ಬರೆವುದೇ ನಿಶ್ಚಯವೆಂದು ಬಿಟ್ಟುಕೊಳ್ಳುತ್ತೇನೆ. ಪಾಪ.—ಏಳು ವರ್ಷದಿಂದ ಹೊಟ್ಟೆನೋವಂತೆ.—ಬುದ್ಧಿ

ಏನು ದೂರವೇ? ನೀವು ಅತ್ತಿತ್ತ ನೋಡು ವುದರೊಳಗೆ ಬಂತು" ಎಂದು ಏಜಂಟರು ಸಮಾಧಾನ ಹೇಳಿದರು.

ಬುದ್ಧನ ನಿರ್ಯಾಣದನಂತರ ಎರಡನೆಯ ಬೌದ್ಧಾವತಾರವು "ಮೋಟಾರ್ ಏಜಂಟ"ನೆಂಬ ಅಭಿದಾನದಿಂದ ಬಂತು. ಪ್ರತಿ ನಿಮಿಷಕ್ಕೂ "ಈಗಲೋ ಈ ದೇಹ ವಿನಾಶ್ಯವಾಗಲೋ" ಎಂಬ ಹಾಡನ್ನು ಹಾಡುತ್ತ ಹೋಗುವ ಬಸ್ಸಿನಲ್ಲಿ ಕುಳಿತು, ದೊರಗಾದ ಭಾಷೆಯಲ್ಲಿ ಅವರು ಅಹಿಂಸೆಯನ್ನೂ ಪರೋಪಕಾರವನ್ನೂ ಕರ್ತವ್ಯವನ್ನೂ ಬೋಧಿಸುವರು; ಉತ್ತೇಜನ ಕೊಡುವರು; ಸಾರ್ವಜನಿಕ ವಿವಾದಗಳಲ್ಲೂ ಕೌಟುಂಬಿಕ ಕಲಹಗಳಲ್ಲೂ ಮಧ್ಯಸ್ಥಿಕೆ ವಹಿಸುವರು; ನಿಮಗೆ ಮಲ್ಲಿಗೆಯಾಗಲಿ ಮುಂಗುಸಿಯಾಗಲಿ ಬೇಕಾದರೆ, ಹಣಕೊಟ್ಟರೆ ತೆಗೆಸಿಕೊಡುವರು; ಪ್ರಯಾಣಕಾಲದಲ್ಲಿ ಎಮ್ಮೆಯನ್ನು ಕರುಸಹಿತ ನಿಮ್ಮೊಂದಿಗೆ ಸಾಗಿಸುವ ಏರ್ಪಾಡುಮಾಡಿ, ಆ ಎಮ್ಮೆ-ಕರುಗಳ ಸಾಕುತಾಯಿ ಮನೆಯವ್ವನ ಕೃತಜ್ಞತೆಯನ್ನೂ ಸಂಪಾದಿಸುವರು; ಎರಡಡಿ ಅಗಲದ ರಸ್ತೆಯಲ್ಲಿ ನಿಮ್ಮ ಮನೆ ಇದ್ದರೆ, ಎಂಟಡಿ ಅಗಲದ ಬಸ್ಸನ್ನು ನಿಮ್ಮ ಅಡುಗೆಕೋಣೆವರೇಗೂ ತಂದು ನಿಮ್ಮನ್ನು ಸ್ವಾಗತೀಕರಿಸುವರು; ಅಪಘಾತವಾದರೆ, ಕುಳಿತಿದ್ದವರ ಸೇವೆಗಾಗಿ ತಾವು ಅಪಘಾತದಿಂದ ಪಾರಾಗಿ, ಉಳಿದೆಲ್ಲರನ್ನೂ ಉಪಚರಿಸುವ. . .

ಸಾಕೀ ಏಜಂಟ್‌ಸ್ತವ!—ಏಜಂಟನ ತತ್ತ್ವಜ್ಞಾನಕ್ಕೆ ಬಗ್ಗಿದೆ. ಮೂರಾಣೆ ಕೊಟ್ಟೆ. ಏಜಂಟನು, ಯಾರೂ ಓದಲಾರದ ಲಿಪಿಯಲ್ಲಿ ಟಿಕೇಟು ಬರೆಕೊಟ್ಟು, 20ರ ವೇಗದಿಂದೋಡುವ ಬಸ್ಸಿನಿಂದ ಹಾರಿ, ಮಾಯವಾದನು.

"ತಮ್ಮ ಹೆಸರೇನು ಸ್ವಾಮಿಗಳೇ?" ಎಂದು ಆ ಹುಳದೊಡನೆ ವಿಚಾರಿಸಿದೆ.

"ನನ್ನ ಹೆಸರು—ರಾಮಪ್ಪಯ್ಯ ಎಂದು. ಗುಂಡಿಹಿತ್ಲು ಶೇಷಪ್ಪಯ್ಯನ ಮಗ ರಾಮಪ್ಪಯ್ಯ ಎಂದು ನನ್ನನ್ನು ಕರೆಯುತ್ತಾರೆ" ಎಂದಿತು ಹುಳ.

"ರಾಮಪ್ಪಯ್ಯನವರೇ! ನಿಮಗೆ ಆ ಸಾಧುವಿನ ಪರಿಚಯವಿದೆಯೇ? ಉಡುಪಿಯಲ್ಲಿ ಎಲ್ಲಿದ್ದಾರೆ ಅವರು? ಯಾವಾಗ ಅವರನ್ನು ಭೇಟಿಯಾಗಬಹುದು?"

"ಎಲ್ಲ ವ್ಯವಸ್ಥೆಯನ್ನು ನಾನು ಮಾಡಿಸುವೆನು. ನಾನೂ ಉಡುಪಿ ತನಕ ಹೋಗುವವನು." ಎಂದರು ರಾಮಪ್ಪಯ್ಯನವರು (ಯಾನೆ ಹುಳ.)

ಬಸ್ಸು ಕುಡ್ಪಿಯಲ್ಲಿ ನಿಂತಿತು. ನಮ್ಮ ಹಿಂದಿನ ಸೀಟನಿಂದ ಒಂದು ಹೆಂಗುಸೂ ಒಬ್ಬ ಗಂಡುಸೂ ಇಳಿದುಹೋದರು. ಅವರು ಇಳಿದು ಹೋಗುವಾಗ ಆ ಕಡೆ ದೃಷ್ಟಿಬೀರಿದೆ. ಹೆಂಗುಸು, . . . ಪಾಪದೃಷ್ಟಿಯಿಂದಲ್ಲ . . . . . ನಿಜವಾಗಿಯೂ ಈಶ್ವರನ ಸೃಷ್ಟಿಯಲ್ಲಿ ಅರ್ಧಾಂಶವು ಹೀಗಿದ್ದರೆ, ಬಹುಶಃ ಗಂಡುಸರಿಗೆ ತಪ್ಪದೆ ಆಗಾಗ್ಗೆ ಬರುವ ಅಜೀರ್ಣ, ನೇತ್ರವ್ಯಾಧಿ, ಸ್ಮೃತಿನಾಶ, ಉನ್ಮಾದ, ಪಿತ್ಥವಿಕಾರ, ಹೃದ್ರೋಗ, ಪಾಂಡು, ನಿದ್ರಾನಾಶ, ಮೊದಲಾದ

ಈಗಣ ಫ್ಯಾಶನೇಬಲ್ ರೋಗಗಳೆಲ್ಲ ಹೆಸರಿಲ್ಲದಂತೆ ಅಡಗುತಿದ್ದುವು. "ಚಂದ್ರವದನೆ" ಖಂಡಿತವಾಗಿಯೂ ಅಲ್ಲ. ಅಂಡಾಕಾರದ ಮುಖ. ವರ್ಣವು ಹಣ್ಣಾದ ನಿಂಬೆಯಂತೆ. (ಈ ಉಪಮೆಯು ವರಕವಿಗಳಿಂದ ಆಯ್ದು ತೆಗೆದುದಲ್ಲ) ಸ್ಥೂಲವಲ್ಲದ ದೇಹ. ನೀಲಿವರ್ಣದ ಸೀರೆಯನ್ನುಟ್ಟುಕೊಂಡಿರಲು, ಆ ವರ್ಣವು ಮೈಯ ವರ್ಣದ ಶೋಭೆಯನ್ನು ಮತ್ತಷ್ಟು ಸೃಷ್ಟೀಕರಿಸುತಿತ್ತು. ಆದರೆ, ಆ ಕಣ್ಣುಗಳು—ಅವು ಏನೋ ನಿಗೂಢ ದುಃಖವನ್ನು ಸೂಚಿಸುತಿದ್ದುವು. ಆ ದುಃಖವೇನು?—

ಕಾರಣವು ಬಹುಶಃ ದೂರವಿಲ್ಲ. ಆಕೆಯ ಬಳಿಯ ಆ ಗಂಡುಸು! . . . . ಆತನನ್ನು ನೋಡಿದರೆ, ನಿಮಗೆ ಕರುಳೆಲ್ಲ ತಿರುಪಿದಂತಾಗುವುದು ನಿಶ್ಚಯ! ಮುಖವು ದೊಡ್ಡ ಕುಂಬಳಕಾಯಿಗಿಂತ ಸ್ವಲ್ಪ ದೊಡ್ಡದು. (ಎಷ್ಟೆಂದು ನೀವೇ ಕಲ್ಪಿಸಿರಿ.) ಕಣ್ಣುಗಳು ಕಾಲಾಣೆ ಚಕ್ಕುಲಿಗಿಂತ ಚಿಕ್ಕವಲ್ಲ, ಅವುಗಳ ಆಟವೂ ಮನಸ್ಸಿಗೆ ಆವ ಸಂತೋಷವನ್ನೂ ಉಂಟು ಮಾಡುವಂಥದ್ದಲ್ಲ. ಮೈವರ್ಣ ಅಚ್ಚ ಕಪ್ಪು; ಒಂದು ನೂರಿನ್ನೂರು ಸಿಡುಬಿನ ಕಲೆಗಳೂ ಅಲ್ಲೇ ಇದ್ದು, ಇನ್ನೀತನಿಗೆ ಸಿಡುಬು ಈ ಜನ್ಮಕ್ಕೆ ಬರಲಾರದೆಂಬಷ್ಟು ಆಳವಾಗಿ ಮನೆಮಾಡಿಕೊಂಡಿದ್ದುವು. ಅವನು ನಡೆವಾಗ, ದೊಡ್ಡ ಕರಡಿಯ ನೆನಪು ನಿಮಗೆ ಖಂಡಿತವಾಗಿಯೂ ಆಗುವುದು. ಆಗದಿದ್ದರೆ ನೀವು ಕರಡಿ ಎಂಬುದನ್ನು ಖಂಡಿತವಾಗಿ ನೋಡಿಲ್ಲವೆನ್ನಬೇಕಾಗುವುದು. ಆಕೆಯ ಗಂಡನೇ ಆಗಿರಬೇಕು.

ನನಗೆ ತಡೆಯಲಾಗಲಿಲ್ಲ. "ಅಯ್ಯನವರೇ, ಕರಡಿಗಳಿಗೆ ಆಡಿನ ಮರಿಯನ್ನು ಜತೆಯಾಗಿ ಬ್ರಹ್ಮನು ಸೃಷ್ಟಿಸುವುದುಂಟೇ?" ಎಂದು, ನನ್ನ ಬಳಿಯ ಹುಳದೊಡನೆ ವಿಚಾರಿಸಿದೆ.

ಬಸ್ಸು ಡರ್‍ರೆಂದು ಹೊರಟಿತು.

ಹುಳವು ನಕ್ಕಿತು; ಮತ್ತೊಂದು ಹುಳವು ಮಾತ್ರ ಕೇಳುವಷ್ಟು ಮೆಲ್ಲನೆ ನಕ್ಕಿತು. ನಾನೂ ಹುಳವಾಗದ್ದಿರಬೇಕು. ಇಲ್ಲವಿದ್ದರೆ ನನಗೆ ಆ ನಗು ಕೇಳಿಸುವುದುಂಟೇ?—"ಏಕೆ ನಕ್ಕಿರಿ ಸ್ವಾಮಿ?" ಎಂದು ಕೇಳಿದೆ.

"ಸ್ವಾಮಿ . . . . . ನಿಮ್ಮ ಹೆಸರು ನನಗೆ ತಿಳಿದಿಲ್ಲ...... ಆದರೂ ಸ್ವಾಮಿ ಎಂದರೆ ಸಾಕು. . . . . ನೀವು ಕೇಳುತ್ತಿರಿ "ಕರಡಿ-ಆಡಿನ ಮರಿ'ಗಳ ಪ್ರಶ್ನೆ; ನಿಮಗೆ ಪ್ರಪಂಚದ ಅನುಭವವೇ ಇಲ್ಲ. ವಿವಾಹವಾಗಿಲ್ಲವೆಂದು ತೋರುವುದು. . . . ."

"ಆಗಿದೆ. ಈಗ ಸನ್ಯಾಸಕ್ಕೆ ಸಿದ್ಧತೆ. ಅದ್ವೈತಮತ ಪ್ರಚಾರಕ . . . ಇತ್ಯಾದಿ ಇತ್ಯಾದಿ ಆಗುವ ಆಸೆ."

"ಇತ್ಯಾದಿಗಳನ್ನು ಮತ್ತೆ ಕೇಳೋಣ. ಈಗ ನನ್ನ ಮಾತು ಕೇಳಿ. ನಿಮ್ಮ ಪ್ರಶ್ನೆ ಏಕೆಂದು ನನಗೆ ತಿಳಿದಿದೆ. ಕುಡ್ಡಿಯಲ್ಲಿ ಇಳಿದ ಆ ದಂಪತಿಗಳನ್ನು ಕುರಿತು ನಿಮ್ಮ ಪ್ರಶ್ನೆ, ಅಲ್ಲವೇ? ಕೇಳಿ: ಬ್ರಹ್ಮನು ಗಂಡನ್ನು ಹೆಣ್ಣಿಗಾಗಿಯೇ

ಸೃಷ್ಟಿಸಿದನು; ಹೆಣ್ಣನ್ನು ಗಂಡಿಗಾಗಿ! ಅದರಲ್ಲಿ ಜತೆಗಳು, ಒಂದಲ್ಲಿ ಒಂದಿಲ್ಲಿ ಕೆಟ್ಟಿರಬಹುದು. ಆದರೆ, ನೀವು ನೋಡಬೇಕಾದ್ದು ಅವರ ರೂಪದ ಸಾಮ್ಯವನ್ನಲ್ಲ-ಏಕಾಭಿಪ್ರಾಯ. ಏಕಹೃದಯಗಳು ಅವರೊಳಗಿರುವುದೇ ಎಂದು. ಗಂಡನು ಕುರೂಪಿಯಾಗಿದ್ದು ಹೆಂಡತಿಯು ಅತಿ ರೂಪಿಯಸಿಯಾಗಿರಬಹುದು. ಆದರೆ, ಅವರೊಳಗೆ ಪ್ರೇಮವಿದ್ದರೆ ಆ ಜತೆಯ ಅಂದ ಕೆಡಲಿಲ್ಲ. ಏಕೆ ಸ್ವಾಮೀ, ಗಂಡ ಹೆಂಡಿರು 'ದೇವದಂಪತಿ'ಗಳಂತಿದ್ದವರಲ್ಲಿ ಸಕುಂದಿಗೆ ಎಪ್ಪತ್ತು ಕಲಹಗಳಾಗುವುದನ್ನು ಇದೇ ಕಣ್ಣಿನಿಂದ ನೋಡಿದ್ದೇನೆ".

ಮಾತನ್ನನುಸರಿಸಿ ಹುಳವು ತನ್ನ ಕಣ್ಣನ್ನು ತೋರಿಸಿತು. ಕಣ್ಣಿನ ಬಳಿ ಕಪ್ಪು ಕಪ್ಪು ಕಲೆಯೊಂದಿತ್ತು. ಅದೇ ಕಣ್ಣಿಂದ ನೋಡಿದುದು ನಿಜವಾಗಿದ್ದಿರಬೇಕೆಂದು ನಂಬಿದೆ.

ಹುಳವು ಒಂದರೆ ನಿಮಿಷ ಸುಮ್ಮನಾಯಿತು. ಏನೋ ದುಃಖದ ಆಲೋಚನೆಯಲ್ಲಿದ್ದಂತೆ ಮುಖವು ಬಾಡಿತು; ಬಾಡುತ್ತ ಹೋಯಿತು. ಇನ್ನಿದು ಹೀಗೆಯೇ ಬಾಡಿ, ಇನ್ನೂ ಕೆಲವು ಕ್ಷಣಗಳೊಳಗೆ ಒಂದು ತರಗೆಲೆಯಂತಾಗುವುದೆಂದು ನಿರೀಕ್ಷಿಸುವಷ್ಟಕ್ಕೆ ಬರುವಲ್ಲಿ, ಮೆಲ್ಲನೆ ಆ ಮುಖದಿಂದ ಒಂದು ಕಿರುದನಿ ಹೊರಟಿತು: "ಸ್ವಾಮೀ!"

"ಓ" ಎಂದೆ.

"ಆಕೆ ಎಷ್ಟು ವ್ಯಥೆಪಡುತ್ತಿರುವಳೋ!"

"ಯಾರು, ಕುಪ್ಪಿಯಲ್ಲಿಳಿದ ಹೆಂಗುಸೇ?"

"ಅಲ್ಲ...."

"ನನ್ನ ಹೆಂಡತಿಯೋ?"

"ನಿಮ್ಮ ಹೆಂಡತಿಯಲ್ಲ—ನನ್ನ ಹೆಂಡತಿ. ಸ್ವಾಮೀ! ನಾನು ಊರು ಬಿಟ್ಟು ಹೋದರೆ, ಒಂದು ಕ್ಷಣವಾದರೂ ಆಕೆ ಮೌನವಾಗಿರಲಾರಳು. ನಾನು ಯಾವಾಗ ಬರುವೆನೆಂದೇ ಚಿಂತೆ ಆಕೆಗೆ!"

"ಕೋಮಲ ಸ್ವಭಾವ; ಪ್ರೇಮದ ಕರುಳು!" ಎಂದು ಸಹಾನುಭೂತಿಯಿಂದಾಡಿದೆ. ಹುಳದ ಸಂಭಾಷಣೆ ಹೀಗೇಕೆ ಮಾರ್ಪಾಟ ಹೊಂದಿತೆಂದೂ ವಿಚಿತ್ರವೆನಿಸಿತು.

"ಕೋಮಲ? ಪ್ರೇಮ? ಅಯ್ಯೋ, ಸ್ವಾಮಿ, ಆ ಶಬ್ದಗಳೇ ಆಕೆಯ ಸ್ವಭಾವದ ವರ್ಣನೆಗೆ ಸಾಲವು. ಇಲ್ಲ ಸ್ವಾಮೀ, ನಮ್ಮ ಭಾಷೆಯಲ್ಲಿ ಗುಣವಾಚಕಗಳೇ ಸಂಬಾರದಂತಹ ಪ್ರೇಮವದು.... ಸ್ವಾಮೀ, ಆಕೆ ಊಟವನ್ನು ಕೂಡ ಮಾಡಿರುವಳೋ ಇಲ್ಲವೋ! ದೇವಾ.....!"

"ನೀವೇಕೆ ದುಃಖಪಡುವಿರಿ? ಈಗ—ಇನ್ನು ಒಂದೆರಡು ತಾಸುಗಳಲ್ಲಿ—ಅಲ್ಲಿಗೆ ಮುಟ್ಟಿ, ಆಕೆಯನ್ನು ಎಚ್ಚರಿಸಿ ಮೈತಟ್ಟಿ, ಊಟ ಮಾಡಿಸುವಿರಂತೆ!"

"ಊಟ? .... ಸ್ವಾಮೀ, ಅಂತಹ ಹೆಂಡತಿಯನ್ನು ನನ್ನಂತಹ ಪಾಪಿಗೆ ದೇವರು ಏಕೆ ಗಂಟುಹಾಕಿದನೋ! ಆ ಮನಮೋಹಕ ರೂಪ—ಆ

ವೃದುಭಾಷಣ— ಆ ಪ್ರೇಮ— ಆ ತ್ಯಾಗ..... ಸ್ವಾಮಿ, ನೀವು ಕವಿಗಳಾದರೆ...."

"ಒಂದೆರಡು ಕವನಗಳನ್ನು ಬರೆದಿದ್ದೇನೆ. "ನೀನೆನ್ನ ಜ್ಯೋತಿ" ಮತ್ತು "ಧನವೇಕೆ? ಮನೆಯೇಕೆ?" ಎಂದು ಎರಡು ಕವನಗಳು ಪ್ರಕಟವಾಗಿವೆ."

"....ನೀವು ಕವಿಯಾಗಿದ್ದರೆ ನಮ್ಮಿಬ್ಬರ ಸಂಸಾರವೇ ನೀವು ಬರೆದು ಮುಗಿಸಲಾರದಷ್ಟು ಕಾವ್ಯವಸ್ತುವನ್ನು ಕೊಟ್ಟೀತು ಸ್ವಾಮಿ!... ಸ್ವಾಮಿ, ನಾನು ಎಡವಿ ಬೀಳುವಲ್ಲೆಲ್ಲ ನನ್ನನ್ನೆತ್ತಿ ಸರಿದಾರಿ ತೋರಿದವಳೇ ಆಕೆ. ಪಾಲನೆಯಲ್ಲಿ ತಾಯಿ, ಆಲೋಚನೆಯಲ್ಲಿ ಮಂತ್ರಿ...! ಸ್ವಾಮಿ, ಆ ರೂಪವನ್ನೂ ಆ ಗುಣಗಳನ್ನೂ ನೆನೆನೆನೆದು ಕಣ್ಣೀರು ಬರುವುದು!"

ಎಲ್ಲಿಯೋ ಏನೋ ಒಂದು ಕೀಲು ಈ ಹುಳದ ಮೆದುಳಲ್ಲಿ ತಪ್ಪಿರಬೇಕೆಂದು ಸಂಶಯಗೊಂಡ ನನಗೆ ಈಗ ಎದೆ ಜೋರಾಗಿ ಬಡಿಯ ಹತ್ತಿತು. ಹೆಂಡತಿಯ ಸಪ್ತ ವರ್ಷದ ಉದರಶೂಲೆಯಲ್ಲಿಯೂ ತಲೆಗೆಡಿಸಿಕೊಳ್ಳದೆ ಅತಿಧೀರಚಿತ್ತನೆಂದು ಹೆಮ್ಮೆ ಪಡುತಿದ್ದ ನಾನು ಈ ಹುಚ್ಚು ಹುಳದೊಡನೆ ಕುಳಿತುಕೊಳ್ಳುವಂತಹ ಕ್ಷಣಗಳು ಬಂದವಲ್ಲ ಎಂದು ಮರುಗಿದೆನು.

"ಸ್ವಾಮಿ!" ಎನ್ನುತ್ತ ನನ್ನ ಸಂದೇಹವೇನೆಂದು ಸಂದೇಹವಿಲ್ಲದೆ ಮುಂದುವರಿಸಿತು ಹುಳ: "ನನಗೆ ಕಾಹಿಲೆಯಾದಾಗ ಆಕೆ.... ಸ್ವಾಮಿ, ನಂಬಲಾರಿರಿ ನೀವು! ಡಾಕ್ಟರರು ಅಮೃತವೆಂದು ಸೀಸೆಯಲ್ಲಿ ತುಂಬಿಕೊಟ್ಟ ವಿಷವನ್ನು ಆಕೆ ಹೊರಗೆ ಚೆಲ್ಲಿಲ್ಲದಿದ್ದರೆ ನಾನಿಂದು ಈ ನನ್ನ ಚರಿತ್ರವನ್ನು ತಮಗೆ ಹೇಳಲು ಬದುಕಿ ಉಳಿಯುತ್ತಿರಲಿಲ್ಲ."

ಅತ್ತಿತು ಹುಳ! ಗಳಗಳನೆ ಅತ್ತಿತು! ಕೊಡಕೊಡ ನೀರು ಆ ಚಿಕ್ಕ ಕಣ್ಣುಗಳಿಂದ ಇಳಿದು ಹೋಯಿತು. ಬೇಸಗೆಯಲ್ಲಾದರೆ ಒಂದು ಫರ್ಲಾಂಗು ರಸ್ತೆಗೆ ಹಾಕಿಸಬಹುದಾದಷ್ಟು ನೀರು! ಇದು ಒಂದು ವಿಜಾತೀಯ ಹುಚ್ಚಿನ ಹುಳವೆಂದು ಖಂಡಿತ ನಂಬಿದೆ.

"ಸ್ವಾಮಿ" ಮುಂದೆ ನುಡಿಯಿತು ಆ ಕೀಟ: "ನನ್ನ ಜೀವಮಾನವೆಲ್ಲ ಆಕೆಯ ಗುಣನಡತೆಗಳ ಸಂಶೋಧನೆಯಲ್ಲೇ ಕಳೆದಿದೆ ಸ್ವಾಮಿ. ಆದರೆ, ಆ ಪರಮಾದ್ಭುತ ಲೀಲೆಯನ್ನು ವರ್ಣಿಸಲಾರೆ!"

ಮತ್ತೆ ಕೆಲವು ಕೊಡನೀರು ಇಳಿದು ಹೋಯಿತು. ಅಸ್ಪಷ್ಟಗೊಂಡ ನನ್ನ ಮನಸ್ಸು ಮತ್ತಷ್ಟು ಅಸ್ಪಷ್ಟಗೊಂಡಿತು. ನನ್ನ ಹೆಂಡತಿಯ ಡಾಕಿಣಿವೊಂದೇ ಸಾಕಾಗಿರುವಾಗ, ಈ ಹುಚ್ಚು ಹುಳದ ಹೆಂಡತಿಯ ಮಹೋಪಾಖ್ಯಾನವನ್ನು ಕೇಳುವಂತಹ ಸೈರಣೆ ನನ್ನಲ್ಲಿರಲಿಲ್ಲ. ಆ ಹುಳದ ಮನಸ್ಸನ್ನು ಬೇರೆ ಕಡೆಗೆ ಸೆಳೆಯೋಣವೆಂದು "ಇಲ್ಲಿ ಕಿತ್ತಳೆ ಹಣ್ಣು ದೊರೆಯುವುದೇ?" ಎಂದು ಕೇಳಿದೆ.

ಹುಳಕ್ಕೆ, ಬೆಂಕಿಗೆ ಎಣ್ಣೆ ದೊರೆತಂತಾಯಿತಾ ಪ್ರಶ್ನೆ. "ಸ್ವಾಮಿ....ನಿಮ್ಮ ದಮ್ಮಯ್ಯ......ಈ ಬಗೆಯಿಂದ ಕೊಲ್ಲಬೇಡಿರಿ ನನ್ನನ್ನು!" ಎಂದು ಬಸಕ್ಕನೆ ಅತ್ತು, ಆ ಹುಳವು ಬಗ್ಗಿ, ನಿಜಕ್ಕೂ

ನನ್ನ ಕಾಲುಗಳಿಗೆರಗಿತು. ಯಾವ ಕೆಟ್ಟ ನಕ್ಷತ್ರದಲ್ಲಿ ಹೊರಟು ಈ ಕುಚ್ಚನ ಈ ಪೀಡೆಗೆ ಬಲಿಯಾದೆನೋ ಎಂದು ನನ್ನ ಆತ್ಮವೂ ಒಸಕ್ಕನೆ ಅತ್ತುಬಿಟ್ಟಿತು. "ಇನ್ನೇನು ಉಂಟೇ ಇದು?" ಎನ್ನುತ್ತ, ಆ ಹುಳವನ್ನೆತ್ತಿದೆ.

"ಸ್ವಾಮೀ......ಕೊಲ್ಲಬೇಡಿರಿ. ಆ "ಕಿತ್ತಳೆ ಹಣ್ಣು" ಎಂಬ ಹೆಸರು! ಆ ಹೆಸರನ್ನೆತ್ತುತ್ತಲೇ ಒಂದು ಘಟನೆಯ ನೆನಪಾಯಿತು. ಸ್ವಾಮೀ, ಒಂದು ದಿನ....ಅಯ್ಯೋ ಭಗವಂತಾ, ನನ್ನನ್ನೇಕೆ ಸೃಷ್ಟಿಸಿದೆ! ಯಾವ ಹೃದಯದಿಂದ ಇದನ್ನು ಸಹಿಸಲಿ!.......ಒಂದು ದಿನ, ಸ್ವಾಮೀ, ಕೇಳಿರಿ! – ಒಂದು ದಿನ, ಆಕೆ ತಿನ್ನಲೆಂದು ಹನ್ನೆರಡು ಕಿತ್ತಳೆ ಹಣ್ಣುಗಳನ್ನು ಮನೆಗೆ ತೆಗೆದುಕೊಂಡು ಹೋದೆ. ಸ್ವಾಮೀ...ಹೇ ನಾರಾಯಣಾ, ಹೇಗೆ ಇವರಿಗೆ ಹೇಳಲಿ! ಹೇಳಿದರೆ, ಇವರು ಹೇಗೆ ಸ್ವಸ್ಥ ಚಿತ್ತದಿಂದ ಕೇಳಲಿ!......ಸ್ವಾಮೀ, ಆ ಎಲ್ಲ ಹಣ್ಣುಗಳನ್ನು ತಾನು ತಿನ್ನದೆ ನನಗೆ ಮೂರು ........ಕೇಳಿರಿ ಸ್ವಾಮೀ—ನಿಜಕ್ಕೂ ಮೂರನ್ನು ತಿನ್ನಿಸಿದಳು ಆಕೆ!"

"ಮೂರನ್ನು?"–ನನ್ನ ಮನಸ್ಸು ದಿಗ್ಭ್ರಾಂತಿಗೊಂಡು, ಯಂತ್ರದಂತಾಗಿತ್ತು.

"ಅಹುದಪ್ಪಾ, ಒಂದು–ಎರಡು—ಮೂರನ್ನು! ನನಗೇ ತಿನ್ನಿಸಿದಳಲ್ಲಾ ಆ ಪುಣ್ಯಾತ್ಮೆ! . . . ಸ್ವಾಮಿ . . ."

"ಓಃ!" (ವಾಚಕ ಋಷಿ! ಸುಳ್ಳು ಹೇಳಲಾರೆ. ಈ "ಓಃ!" ಎಂಬುದು ನನ್ನ ಆತ್ಮವೇದನೆಯ ಕೂಗು.)

". . ಆ ಗುಣಕ್ಕೆ ತಕ್ಕಂತೆ ಬ್ರಹ್ಮನು ಆಕೆಗೆ ಮೇನಕೆಯಂತಹ ರೂಪವನ್ನು...."

ಬಸ್ಸಿನಿಂದ ಹಾರಿ ಆತ್ಮಹತ್ಯೆ ಮಾಡಿಕೊಳ್ಳೋಣವೆಂದಾಯಿತು. ಅಷ್ಟರಲ್ಲೇ ಬಸ್ಸು ಗುರ್ಪುರನದಿಯ ಸಂಕವನ್ನು ದಾಟಿ, ಊರನ್ನು ಸೇರಿತು. ಎಲ್ಲಿಂದಲೋ–ಒಂದು ದೀರ್ಘಾಕಾರದ ಸ್ತ್ರೀ ದೇಹವು ಅದನ್ನು (ಬಸ್ಸನ್ನು) ಅಡ್ಡಗಟ್ಟಿ ನಿಲ್ಲಿಸಿತು. ಪುಸಕ್ಕೆಂದು ಒಂದು ಕೈಯನ್ನು ಚಾಚಿ, ಆ ಹುಳವನ್ನು ಹೊರಕ್ಕೆಳೆಯಿತು. ತಾಟಕೆಯೋ, ಶೂರ್ಪನಖಿಯೋ, ಲಂಕಿಣಿಯೋ ಎಂದು ದಿಗ್ಭ್ರಮೆಗೊಂಡೆ.

"ಗುಡ್‌ಬಾಯ್! ಇವಳೇ ನನ್ನ ಪ್ರೇಮದೇವತೆ. ಸಿಕ್ಕಿದಳು ಸ್ವಾಮೀ ನಡುದಾರಿಯಲ್ಲೆ!" ಎಂದು ನಗುತ್ತ, ಹುಳವು ಆಕೆಯ ನೀಳವಾದ ತೋಳುಗಳ ನಡುವೆ ಮಾಯವಾಯಿತು!

ನಾನು ಉಡುಪಿಗೆ ಖಂಡಿತವಾಗಿ ತಲಪಲಿಲ್ಲ. ಗುರ್ಪುರದಿಂದಲೇ ಮನೆಗೆ ಹಿಂದಿರುಗಿ, ದ್ವಿಗುಣಿತ ವ್ಯಥೆಯಿಂದ ನನ್ನ ಬರವನ್ನು ನಿರೀಕ್ಷಿಸುತ್ತ ಕುಳಿತ ಹೆಂಡತಿಯ ಬೆನ್ನು ಸವರುತ್ತ ಆನಂದಬಾಷ್ಪಗಳನ್ನು ಸುರಿಸಿದೆ. ಬಸ್ಸಿನಲ್ಲಿ ನನ್ನ ಆತ್ಮವನ್ನು ತಿವಿದು ತಿವಿದು ಎಚ್ಚರಿಸಿದ ಆ ಹುಚ್ಚು ಹುಳವು ಪರ್ವತಾಕಾರದ ಆ "ತಾಳೆಮರ" ಹೆಂಗುಸನ್ನು ಪ್ರೀತಿಸಬಲ್ಲದಾದರೆ, ನಾನು ನನ್ನ ಈ ಚಿಕ್ಕ ಆಡಿನ ಮರಿಯನ್ನು ಪ್ರೀತಿಸಲಾರೆನೆ?

ಆ ಹುಳವು ಹುಚ್ಚು ಇರಲಿ, ಪೆಚ್ಚು ಇರಲಿ,–ನನಗೊಂದು ಪಾಠವನ್ನು ಖಂಡಿತವಾಗಿ ಕಲಿಸಿದೆ—"ಕೈ ಹಿಡಿದ ಹೆಂಡತಿಯನ್ನು ಕೈಬಿಡದೆ ಪಾಲಿಸು!" ಎಂದು.

# ೭. ಕೊಲೆಗಾರರ ಸಭೆ

ಸಮಸ್ತ ವೈದ್ಯರನ್ನು ಧ್ಯಾನಿಸಿ, ಅವರ ಕ್ಷಮೆಯನ್ನು ಯಾಚಿಸಿ, ಈ ಕತೆಯನ್ನಾರಂಭಿಸ-ವೆನು.

ಅದು ಚಾಮ್ನಾಡ್ ಜಿಲ್ಲೆಯ ಸುದ್ದಿ. ಬಹುಹಿಂದಿನ ಕಾಲ. ಆಗ "ಇಸವಿ" ಎಂಬುದಿರಲಿಲ್ಲ; ಜನವರಿ–ಫೆಬ್ರವರಿ, ಅಕ್ಟೋಬರ–ನವಂಬರ ಮೊದಲಾದ ವರಿ–ಬರಗಳಿರಲಿಲ್ಲ, ಗಡಿಯಾರಗಳೂ ಇರಲಿಲ್ಲ. ಆದ್ದರಿಂದ ಸೂರ್ಯನು, ತನಗಿಚ್ಚೆಯಾದಾಗ ಉದಯಿಸಿ, ಮನಬಂದಾಗ ಅಸ್ತಮಿಸುತ್ತಿದ್ದನು. ಇದಕ್ಕೆ ಯಾರೂ ಆಕ್ಷೇಪಿಸಲೂ ಇಲ್ಲ.

ವಿಚಿತ್ರವೆಂದರೆ ಆ ಜಿಲ್ಲೆಯಲ್ಲಿ ವೈದ್ಯರಿದ್ದರು. ಅವರಿಗೆ ಬೇಕಾದಂತೆ ರೋಗಗಳಿರಲಿಲ್ಲ; ಇದ್ದ ರೋಗಗಳು ಕೆಲವೇ. ವೈದ್ಯರು ದೊಡ್ಡ ದೊಡ್ಡ ಮುಂಡಾಸುಗಳನ್ನು ಕಟ್ಟಿ, ಮೀಸೆಯನ್ನು ಹುರಿಮಾಡಿ, ಅರ್ಧ ಫೀಟು ದಪ್ಪದ ಹತ್ತಿಪ್ಪತ್ತು ಗ್ರಂಥಗಳನ್ನು ಸುತ್ತಲೂ ರಾಶಿಯೊಡ್ಡಿ ಕುಳಿತು, ಬಂದವರಿಗೆಲ್ಲ, ಕಷಾಯ—ಆಸವ–ಲೇಹ್ಯ–ಅರಿಷ್ಟ–ತೈಲ—ಗುಗ್ಗುಲು–ಘೃತಗಳನ್ನು ಕೊಟ್ಟು,–ಅವರ ರೋಗ ಪರಿಹಾರಕ್ಕೆ ವಾಯಿದೆ ಹೇಳುತ್ತಿದ್ದರು. ಆಷಾಢ ಮಾಸದ ಶುಕ್ಲಪಕ್ಷ ಸಪ್ತಮಿ ದಿನ ೨೨ನೇ ಗಳಿಗೆಯ ಐದನೇ ಕ್ಷಣದಲ್ಲಿ ಜ್ವರ ಇಳಿಯುವುದೆಂದು ಆ ವೈದ್ಯರು ಹೇಳಿದರೆ, ಆ ದಿನ ಅದೇ ಕ್ಷಣದಲ್ಲಿ ಜ್ವರವು, ಇವರ ಮಾತನ್ನು ಮೀರಲಾರದೆ ಸುಯ್ಯೆಂದು ಹೊರಟೇ ಹೋಗುತ್ತಿತ್ತು.

ಮೆಲ್ಲನೆ ಕಾಲವು ಬದಲಾಯಿಸಿತು, "ಇಸವಿ" ಬಂತು; ಜನವರಿ–ಫೆಬ್ರವರಿಗಳು ಬಂದುವು; ಘಂಟೆ ಬಂತು; ನಿಮಿಷ ಬಂತು; ಸೆಕುಂದು ಬಂತು; ಸೂರ್ಯನು ಕ್ರಮವಾಗಿ ಮೂಡಿ, ಕ್ರಮವಾಗಿ ಅಸ್ತಮಿಸಲಾರಂಭಿಸಿದನು. ಇವುಗಳೊಂದಿಗೆ ಒಂದು ಸ್ತೆಥಸ್ಕೋಪ್, ಒಂದು ಡಿಕ್ರಿ, ಮತ್ತು ಕೆಲವು ಬಾಟಲಿಗಳೊಡನೆ "ದಾಕ್ತರನೂ" ಬಂದನು!

ವೈದ್ಯರು ಮುಂಡಾಸುಗಳ ಸೈಜನ್ನು ಸಣ್ಣಗೆ ಮಾಡಿದರು; ಆಸವ–ಅರಿಷ್ಟಗಳನ್ನು ಯಾರಿಗೂ ಕೊಡಲಾರದೆ ಮರೆಸಿಟ್ಟರು; ತಾವೂ ಡಿಕ್ರಿಗಳನ್ನು ತಂದು ದಾಕ್ತರರಾದರು. ಊರಲ್ಲೆಲ್ಲ ದಾಕ್ತರರೇ ತುಂಬಿದರು. ಆ ಮೇಲೆ, ನಾನಾ ರೋಗಗಳು ಬಂದುವು. ಮೂವರು ಪ್ರಜೆಗಳಿಗೆ ಒಬ್ಬನಂತೆ ಲೆಕ್ಕ ಹಾಕಿ ಅಲ್ಲಲ್ಲಿ ನಿಂತರು. ಇಂತಿದು ಪೂರ್ವಚರಿತ್ರ. ಈಗ,—ಇನ್ನು ಓದಿರಿ.

ಚಾಮ್ನಾಡ್ ಜಿಲ್ಲೆಯ ವೈದ್ಯರೆಲ್ಲ, ಒಂದು ರಾತ್ರೆ, ಒಂದು ಗವಿಯಲ್ಲಿ ಸಭೆ ಸೇರಿದರು. ಅತಿಗಹನವಾದ, ಅವರ ಜೀವನಕ್ಕೆ ಸಂಬಂಧಿಸಿದ ಅತಿಮಹತ್ವದ, ಒಂದು ವಿಷಯವನ್ನು ರಹಸ್ಯವಾಗಿ ಚರ್ಚಿಸಲು ಈ ಸಭೆಯು ಏರ್ಪಾಡಾಗಿತ್ತು. ಆದುದರಿಂದಲೇ ಒಂದು ಗವಿಯನ್ನು ಅವರು ಸಭಾರಂಗವಾಗಿ ಆರಿಸಿದ್ದರು.

ಕಣ್ಣಿನ ವ್ಯಾಧಿಗಳನ್ನು ಗುಣ ಪಡಿಸಲು ಹೆಸರಾದ ಡಾ। ರಾಮಯ್ಯ, ಮೂಗಿನ ಸ್ಪೆಶಲಿಸ್ಟ್ ವೆಂಕಟ್ರಾಮು, ಕಿವಿಯ ವಿಚಕ್ಷಣ ಡಾ। ಜನ್ನಪ್ಪಗಾರು, ಎದೆ ರೋಗಗಳಲ್ಲಿ ಪ್ರಖ್ಯಾತಿ ಪಟ್ಟ ಲೋಕೇಶ್ವರನಾಥ, ಜ್ವರಗಳಲ್ಲಿ ಅಗ್ರಗಣ್ಯನಾದ

ಡಾ। ಸುಬ್ಬು ಲಕ್ಷ್ಮಿ ನರಸಿಂಹ ವೆಂಕಟೇಶ, ಕಾಲ್ಬೆರಳುಗಳ ರೋಗಗಳಲ್ಲಿ ಒಂದು ಹೆಸರಿರುವ ಡಾ। ಸಂಕಪ್ಪಯ್ಯ, ಬೆನ್ನಿನ ಹುರಿಯ ವ್ಯಾಧಿಗಳಲ್ಲಿ ಪ್ರಥಮ ಶ್ರೇಣಿಯವರೆನಿಸಿದ ಡಾ। ಗುಡಾರ ಗುಂಡು ನರಸಯ್ಯ, ಬೋಳು ತಲೆಯವರ ಪ್ರೀತಿಯವರಾದ ಡಾ। ಸಣ್ಣಕ್ಕಿ, ಮೊಡವೆಗಳ ಅರಸರೆನಿಸಿದ ಸದಾರಾಮರಾವ್, ಸಿಗಿದ ತುಟಿಗಳನ್ನು ಸಂಧಿಗೂಡಿಸಿ, ಸಂಧಿಗೂಡಲೊಪ್ಪದವುಗಳನ್ನು ಪುನಃ ಸಿಗಿಯುವ ಜಾಣರಾದ ಮುರಾರಿ ರಾಯರು—ಇನ್ನು ಇಲ್ಲಿ ಹೆಸರು ಕೊಡಲಾರದ, ವರ್ಣಿಸಲಾರದ ನೂರಾರು ಡಾಕ್ಟರರು—ಅಲ್ಲಿ ಕೂಡಿದ್ದರು.

ಸಭೆಯಲ್ಲಿ ತೀರ್ಮಾನವಾಗಲಿದ್ದ ವಿಷಯವೊಂದೇ:—"ಅತಿ ಹೆಚ್ಚು ಕೊಲೆ ಮಾಡಿದವರಾರು?"

ಭಾಷಣಕಾರರ ಪಟ್ಟಿಯು ಸಿದ್ಧವಾಗಿತ್ತು. ಅದರಂತೆ ಡಾ। ಸಣ್ಣಕ್ಕಿಯವರು ಎದ್ದು ನಿಂತರು:—

"ಪ್ರಿಯ ಸಹೋದರರೇ!"

ಪ್ರಿಯ ಸಹೋದರರೆಲ್ಲ ಮೌನ. ಎಲ್ಲ ಪ್ರಿಯರ ಕಣ್ಣುಗಳೂ ಕಿವಿಗಳೂ ಸಣ್ಣಕ್ಕಿ ಪ್ರಿಯ ಸಹೋದರನ ಕಡೆಗೇ!

"ನನ್ನ ಪ್ರಿಯ ಸಹೋದರರೇ! ಇಂದು ನಿಮ್ಮ ಮುಂದಿರುವವನು ಡಾಕ್ಟರ್ ಸಣ್ಣಕ್ಕಿ. ಬಿರುದೂ ದೊಡ್ಡದು. ಕಲಿತ ವಿದ್ಯೆ—ಬೋಳು ತಲೆಗಳ ಮೇಲೆ ಪುನಃ ಕೂದಲು ಚಿಗುರುವಂತೆ ಮಾಡುವುದು. ಬಹು ಅಪಾಯಹೀನವೂ, ಸರಳವೂ ಆದ ವೃತ್ತಿ. ಇಂತಹ ವೃತ್ತಿಯ ನಾನು ಕೊಲೆ ಮಾಡಿರಬಹುದೇ ಎಂದು ನಿಮ್ಮ ಪ್ರಶ್ನೆ!"

ಎಲ್ಲರೂ ತಂತಮ್ಮ ತಲೆಗಳ ಮೇಲೆ ಕೈಯಾಡಿಸಿದರು. ಬೋಳು ತಲೆಯ ಡಾಕ್ಟರರು ಎದೆ ಮುಟ್ಟಿ ನೋಡಿ ನೋಡಿದರು. ಆದರೆ, ಯಾರೂ ಆಗಲೇ ಅಲ್ಲಿ ಸತ್ತಿರಲಿಲ್ಲ.

ಸಣ್ಣಕ್ಕಿಯವರು ಮುಂದುವರಿಸಿದರು:-"ಪ್ರಿಯರೇ! ನಿಮ್ಮ ಗಣಿತ ತಪ್ಪು. ನಾನು ನಿಜವಾಗಿ ಕೊಂದಿದ್ದೇನೆ,—ತಾಜಾ ಮನುಷ್ಯರನ್ನು, ಬಂಗಾರದಂತಹ ಮನುಷ್ಯರನ್ನು, ಕೊಂದಿದ್ದೇನೆ. ಒಬ್ಬಿಬ್ಬರನ್ನಲ್ಲ, ಹದಿಮೂರು ಮಂದಿಯನ್ನು ಕೊಂದಿದ್ದೇನೆ!"

"ಕೊಂದಿದ್ದೇನೆ?" — ಏ ನ ಂ ತೆ ಇದ!-ಬೋಳು ತಲೆಯ ಸ್ಪೆಶಲಿಸ್ಟನು ಕೊಲ್ಲುವುದೆಂದರೆ—ಏನು ನಗೆಗೇಡು! ನಂಬುವವರಾರು?

—"ಅಹುದು ಸಹೋದರರೇ, ಕೊಂದಿದ್ದೇನೆ! ಐವರು, ತಮ್ಮ ತಲೆ ಮೇಲೆ ಕೂದಲು ಬರುವುದೆಂದು ಐದು ವರ್ಷ ಕಾದುಕಾದು, ಇನ್ನು ಕೂದಲು ಈ ಜನ್ಮದಲ್ಲಿ ಬಾರದೆಂದು ಒಂದು ದಿನ ಫಕ್ಕನೆ ಹೇಗೋ ತಿಳಿದುಬಂದು, ಎದೆಯೊಡೆದು ಸತ್ತರು; ಮತ್ತೆ ಮೂವರು, ನಾನು ಕೊಟ್ಟ ಕೆಲವೌಷಧಿಗಳನ್ನು ತಲೆಗೆ ಹಚ್ಚಿ, ವಿಷವೇರಿಯೇ ಸತ್ತರು; ಇನ್ನಿಬ್ಬರು, ವೈರಾಗ್ಯ ತಾಳಿ, ಬಾವಿಗೆ ಹಾರಿದರು; ಉಳಿದ ಮೂವರು ಕೊರಗಿ ಸೊರಗಿ, ಹಾಸಿಗೆ ಹಿಡಿದು ಸತ್ತರು!"

ಸಭೆಯಲ್ಲಿ ಉಸಿರಿಲ್ಲ.

ಡಾ। ಸಣ್ಣಕ್ಕಿಯವರು ಭಾಷಣವನ್ನು ಮುಕ್ತಾಯಗೊಳಿಸಿದರು—"ಇನ್ನು ಎಪ್ಪತ್ತು ಮಂದಿಗಳೀಗ ಕಾಯುತಿದ್ದಾರೆ!"

ಸಭೆಯಲ್ಲಿ ಕರತಾಡನವಾಯಿತು. ಸಣ್ಣಕ್ಕಿಯವರು ಎದ್ದು ಹೋದರು. ಪಟ್ಟಿ ಪ್ರಕಾರ ಎರಡನೆಯದಾಗಿ ಡಾ। ಸದಾರಾಮರಾಯರು ಬಂದು ನಿಂತರು.

"ನನ್ನ ಪ್ರೀತಿಯ ಬಂಧುಗಳೇ! ನನ್ನ ಕೆಲಸ ಹೆಚ್ಚೇನೂ ಇಲ್ಲ. ಶಾಲಾ ವಿದ್ಯಾರ್ಥಿ—ವಿದ್ಯಾರ್ಥಿನಿಯರ ಗಲ್ಲಗಳ ಮೇಲೆ ಮೂಡಿಬರುವ ಕೆಂಪಿನಂತಹ ಮೊಡವೆಗಳನ್ನು ಗುಣಪಡಿಸುವುದು. ಹುಡುಗಿಯರು ಹೆಚ್ಚಾಗಿ ತಮ್ಮನ್ನೆ ನೋಡುತ್ತಿರುವರೆಂದು ಹುಡುಗರೂ, ಹುಡುಗರು ನೋಡುವರೆಂದು ಹುಡುಗಿಯರೂ ಈ ಮೊಡವೆಗಳನ್ನು ದ್ವೇಷಿಸಿ, ನನ್ನಲ್ಲಿಗೆ ಬರುವರು. ನಾನು ಅವರನ್ನು ಕೊಂದೇ ಅವುಗಳನ್ನು ಮುಗಿಸುವೆನು. ಕೊಲ್ಲುವ ವಿಧಾನ ಬಹು ಸುಲಭ. ಮೂರು ದಿನಕ್ಕೊಮ್ಮೆ ಒಂದೊಂದು ಹೊಸ ಮುಲಾಮನ್ನು ಕೊಡುವುದು; ಆ ಮುಲಾಮನ್ನು ಹಚ್ಚಿದ್ದಂತೆ ಮೊಡವೆಗಳು ಮರಿಯಿಡುವುವು. ಒಂದು ದಿನ, ಅವರು ಬೇಸರಬಂದು. ಅವುಗಳನ್ನು ಚಿವುಟುವರು. ಅಂದೇ ಸಾಯಂಕಾಲ ಜ್ವರ; ಮರುದಿನ ಮುಖ ಮೂರು ಪಾಲು ಉದ್ದ ಆರು ಪಾಲು ಅಗಲ; ಎರಡನೆ ದಿನ ಬಂಧು-ಬಳಗ-ಉಪಾಧ್ಯಾಯರು-ದೂರದ ನೆಂಟರು-ಇವರೆಲ್ಲರೂ ಬಂದು ಕೊನೆಯ ಭೇಟಿ; ಮೂರನೆ ದಿನ ನಾಟಕಕ್ಕೆ ಮಂಗಲ! ಇಂತಹ ಎಪ್ಪತ್ತು ಮಂದಿಯನ್ನು ಕೊಂದ ದಾಖಲೆ ನನ್ನದು!"

ಸದಾರಾಮರಾಯರ ಭಾಷಣಾಂತ್ಯದಲ್ಲಿ ಎರಡು ನಿಮಿಷ ಕರತಾಡನವಾಯಿತು. "ಭಾಪು ಭಾಪು!" ಎಂದಿತು ವೈದ್ಯಗಣ. ಮೀಸೆ ಬೋಳಿಸಿಕೊಂಡ ತುಟಿಯನ್ನು ಮಂಡೂಕ ರಾಜನಂತೆ ಬಿರಿದು, ಸದಾರಾಮರಾಯರು ತಮ್ಮ ಸ್ಥಾನಕ್ಕೆ ನಡೆದುಹೋದರು.

ಮೂರನೆ ಭಾಷಣಕಾರರಾಗಿ ಲೋಕೇಶ್ವರನಾಥರು ಬಂದರು. ಎದೆಯೊಳಗಿನ ಏರಿಳಿತಗಳನ್ನು ಲೆಕ್ಕಮಾಡಿ ಮದ್ದುಕೊಡುವ ಜಾಣರು ಇವರೆಂದು ಊರಲ್ಲಿ ಹೆಸರು. ಇವರ ಕೊಲೆಯ ದಾಖಲೆ ಏನಿರಬಹುದೆಂದೇ ಎಲ್ಲರಿಗೆ ಕುತೂಹಲ.

ನಾಥರು ಆರಂಭಿಸಿದರು:—"ಮಾನ್ಯರೇ, ನಾನು ಹೆಚ್ಚಿಗೆ ಆಡುವವನಲ್ಲ. ಕಾರಣ, ನಾನು ಮದ್ದುಕೊಡುವ ರೋಗಗಳೂ ಹೆಚ್ಚಿನ ಅವಧಿಯವುಗಳಲ್ಲ!"

"ಶಾಭಾಸ್!" ಎಂದಿತು ವೈದ್ಯಗಣ.

"ಮತ್ತೆ ನಾನು ಮದ್ದು ಕೊಟ್ಟವರು ಹೆಚ್ಚು ಬದುಕಲೂ ಒಪ್ಪುವವರಲ್ಲ!"

"ಭಲೇ!" ಎಂದು ಉದ್ಘೋಷಿಸಿತು ವೈದ್ಯಕೂಟ.

"ಹೃದ್ರೋಗವು ಹೆಚ್ಚಿದ ದಿನಗಳಲ್ಲಿ ನಾನಿರುವುದು ತಮ್ಮ ಪುಣ್ಯವೆಂದು ಜನ ರಾಡಿಕೊಳ್ಳುವರು. ಆದರೆ, ನಾನು ಬಂದಂದಿನಿಂದ ಹೃದ್ರೋಗವು ಹೆಚ್ಚಿದೆಯೆಂದು ಯಾರಿಗೂ ತಿಳಿದಿಲ್ಲ!"

"ಭಳಿರೇ!" ಎಂದು ಕೂಗಿದರು ವೈದ್ಯರಾಜರು.

"ದಿನಕ್ಕೊಂದು ಶಾಲೆ—ಇದೇ ನನ್ನ ದಾಖಲೆ!" ಎಂದು ಮುಗಿಸಿದರು ನಾಥರು.

"ಭಳಿರೆ—ಭಾಪು—ಶಹಭಾಸ್!" ಎಂದು ಕಾಲು ತಾಸು ಕೂಗೇ ಕೂಗು ಎದ್ದಿತು ವೈದ್ಯಗಣದಲ್ಲಿ.

ನಾಲ್ಕನೆಯ ಸರತಿ ಬಂದುದು ಸುಬ್ಬು ಲಕ್ಷ್ಮಿ ನರಸಿಂಹ ವೆಂಕಟೇಶನವರದು. ಇವರ ಹೆಸರೂ ಉದ್ದ; ಇವರು ಗುಣಪಡಿಸ ಹೊರಡುವ ರೋಗಗಳೂ ಉದ್ದ. ಹೀಗೆಯೇ ಇವರ ಕೊಲೆಯ ದಾಖಲೆಯ ಸಂಖ್ಯೆಯೂ ಉದ್ದವಿರಬಹುದೇ—ಎಂದು ಅಲ್ಲಿ ನೆರೆದ ವೈದ್ಯರು ಆಶ್ಚರ್ಯಪಡುತ್ತಿರಲು—ಸೃಷ್ಟಿಸ್ಥಿತಿಲಯಗಳಿಗೊಡೆಯನಾದ ಸಾಕ್ಷಾತ್ ವಿಷ್ಣುವೋ ಎಂಬಂತೆ ಸು। ಲ। ನ। ವೆ ಈಶವನವರು ಭಾಷಣಪೀಠದ ಕಡೆಗೆ ನಡೆದು ಬಂದರು.

ಬಂದವರೇ, ಮೆಲ್ಲನೆ ಸುತ್ತಲೂ ನೋಡಿದರು. ಆ ಮೇಲೆ, "ಸಂಗಾತಿಗಳೇ, ಡಾಕ್ಟರರಾಗಿರುವುದರಿಂದ ನೀವು ಮಹಾಧೈರ್ಯಶಾಲಿಗಳೂ ಆಗಿರುವಿರೆಂದು ನನ್ನ ನಂಬುಗೆ. ಆದರೂ, ಹೃದಯದೌರ್ಬಲ್ಯವಿದ್ದವರು ಒಬ್ಬಿಬ್ಬರು ಇರಲೂ ಬಹುದು. ಇದ್ದರೆ,—ನಾನು ಭಾಷಣವನ್ನಾರಂಭಿಸುವ ಮೊದಲೇ ಹೊರಟು ಹೋಗಬೇಕೆಂದು ವಿನಂತಿ!" ಎಂದರು.

ಸಭೆಯು ಮೌನ.

"ಸರಿ! ಎಲ್ಲರೂ ಪಾಷಾಣ ಹೃದಯರೇ ಆಗಿರುವಿರಿ. ಚಿಂತಿಲ್ಲ. ಹೃದಯ ದೌರ್ಬಲ್ಯವುಳ್ಳವರು ಹೊರಟು ಹೋಗಿರಿ—ಎಂದಾಗ, ಕೊಲೆಗೆ ಹೆದರದವನೀತನು ಏಕೆ ಹೀಗೆ ಕರುಣೆಯಿಂದಾಡುವನೆಂದು ನೀವು ಆಶ್ಚರ್ಯಪಡಬಹುದು. ಆದರೆ,—ಬಂಧುಗಳೇ, ಇಲ್ಲ—ನಿಜವಾಗಿಯೂ ಇಲ್ಲ—ನನ್ನ ಸಹವೃತ್ತಿಯವರನ್ನು ನಾನು ಕೊಲ್ಲಲಾರೆ. ಅದು ಧರ್ಮವಿರುದ್ಧವಾದುದು."

ಹೀಗನ್ನುವಾಗ ಸು। ಲ। ನ। ವೆ। ಈಶನವರ ಕಣ್ಣುಗಳಿಂದ ದಳದಳನೆ ನೀರಿಳಿಯಿತು. ವಾಚಕ ವೈರಾಗಿ! ನಿಷ್ಕರುಣೆಯಿಂದ ಕುರುಗಳನ್ನು ಸಿಗಿದು, ಒತ್ತಿ, ಹಿಂಡಿ, ತಿಕ್ಕುವವರಿಗೆ ಕರುಣೆಯೆಲ್ಲಿಂದ? ಕಣ್ಣೀರೆಲ್ಲಿಂದ?—ಎಂದು ನೀವೂ ಆಶ್ಚರ್ಯಪಡಬಹುದು. ಆದರೆ, ನಿಜವಾಗಿಯೂ ಅವರು ಕರುಣಿಗಳು. ತಮ್ಮವರಿಗಾಗಿ ಅಳುವವರೇ.

ಸು। ಲ। ನ। ವೆ। ಈಶನವರ ಕಣ್ಣೀರನ್ನು ನೋಡಿ ವೈದ್ಯಗಣವೂ ಅತ್ತಿತು. ನೂರಾರು ವೈದ್ಯರು ಅತ್ತಾಗ ಬಿದ್ದ ಆ ಕಣ್ಣೀರು ಕೆಲವು ಸರೋವರಗಳಷ್ಟು ಆಗಲು,—ಆ ನೀರಿನ ಮೇಲಿಂದ ಮೆಲ್ಲನೆ ಆಗಲೆ ಗಾಳಿ ಬೀಸಿ, ಅದು ತಂಪಾಗಿ, ಮನಸ್ಸಿಗೆ ಉಲ್ಲಾಸ ಕಂಡು, ಎಲ್ಲರೂ ಅಳುವನ್ನು ನಿಲ್ಲಿಸಿದರು. ಸು। ಲ। ನ।ವೆ। ಈಶನವರು ಮುಂದುವರಿಸಿದರು:—

"ಬಂಧುಗಳೇ, ನಾನು ಎರಡು ಲಕ್ಷ ಜನರಿಗೆ ಜ್ವರಕ್ಕಾಗಿ ಔಷಧಕೊಟ್ಟೆ

ರುವೆನು. ಆದರೆ, ಮೂರುಲಕ್ಷ ಜನರನ್ನು, ಜ್ವರಗಳ ಕಾರಣಕ್ಕಾಗಿಯೂ ಸಿಗಿದಿರುವೆನು!"

ಮೂರುಲಕ್ಷ?—ಸಭೆಯು ಅವಾಕ್ಕಾಯಿತು.

"ಮಾನ್ಯರೇ, ಬಸಬಸಕ್ಕೆಂದು ಹೊಟ್ಟೆಗಳನ್ನು ಸಿಗಿದುಸಿಗಿದು ರಾಶಿಯೊಟ್ಟಿದ್ದೇನೆ. ಕೆಲವರನ್ನು ಮೂಗಿನಿಂದ ಕಾಲಿನವರೆಗೆ ಬಗೆದಿದ್ದೇನೆ. ಒಂದೇ ಒಂದು ಹುಳವು ಬದುಕಿ ಉಳಿಯಲಿಲ್ಲ!"

ಸುಮಾರು ಇನ್ನೂರೈವತ್ತು ಡಾಕ್ಟರರು ನಿಟ್ಟುಸಿರಿಟ್ಟರು. ಅವರ ಸಂಬಂಧಿಕರಿಗೆಲ್ಲ ಈ ಸು। ಲ। ನ। ವೆ। ಈಶನವರೇ ಒಪರೇಶನ್ ಮಾಡಿದ್ದರು.

"ಇನ್ನು ಬಂಧುಗಳೇ, ಜ್ವರಕ್ಕಾಗಿ ನಾನು ಔಷಧಕೊಟ್ಟವರ ಚರಿತ್ರವನ್ನು ವಿಶೇಷ ವರ್ಣಿಸಬೇಕಾಗಿಲ್ಲ. ಆದರೆ, ನಾನು ಔಷಧಕೊಟ್ಟವರಲ್ಲಿ, ಔಷಧ ಕುಡಿವು ಬೇಸತ್ತು ಮರಣವು ಸನ್ನಿಹಿತವಾಯಿತೆಂದು ಹುಚ್ಚನಾಗಿ ಒಬ್ಬ ರೋಗಿಯು ಆಡಿದ ಒಂದು ಮಾತನ್ನು ಇಲ್ಲಿ ಹೇಳುತ್ತೇನೆ. ಆ ಮಾತು, ಹೊರಗಿನ ಜಗತ್ತಿಗೆ ವಿಶೇಷವೆಂದು ತೋರಬಹುದಾದರೂ ನಿಜವಾಗಿಯೂ ನಮಗೆ ಗೌರವವನ್ನು ತರುವಂತಹದೇ. "ನಿಮಗೆ ಡಿಗ್ರಿಗಳನ್ನು ಕೊಡುವರಲ್ಲ—ಯಾಕೆಂದು ಗೊತ್ತೇ?"ಎಂದು ಬಡಪ್ರಾಣಿಯು ನನ್ನನ್ನು ಕೇಳಿತು. "ಯಾಕೆ?" ಎಂದು ಕೇಳಿದೆ. "ನಿಮಗೆ ಡಿಗ್ರಿಕೊಟ್ಟು ನಮ್ಮ ಕಡೆಗೆ ಕಳುಹಿಸದೆ ನಾವು ಸಾಯುವುದಿಲ್ಲವೆಂದು ಸರಕಾರಕ್ಕೆ ಗೊತ್ತು!" ಎಂದಿತಾ ಪ್ರಾಣಿ. ಆ ಮೇಲೆ ಹೆಚ್ಚು ಸಮಯ ಉಳಿಯಲಿಲ್ಲ. ನಾನು ಒಂದು ಡೋಝ್ ಮದ್ದುಕೊಟ್ಟೆ. ಕುಡಿದು, ಉಸಿರನ್ನೂದಿಬಿಟ್ಟಿತು!"

ಸಭೆಯಲ್ಲಿ ಕರತಾಡನವಾಯಿತು. ಸು। ಲ। ನ। ವೆ। ಈಶನವರು ಮುಂದುವರಿಸಿದರು:—"ತಮ್ಮಂದಿರಾ! ನನ್ನ ದಾಖಲೆ ಇದಲ್ಲ. ಇದಕ್ಕಿಂತಲೂ ಮಹತ್ತರವಾದುದು. ಅದಕ್ಕೊಂದು ಸಂಖ್ಯೆಯಿಲ್ಲ; ಮಿತಿಯಿಲ್ಲ; ಅವಧಿಯಿಲ್ಲ. ನೀವಾರೂ ಹೊಗಳಿಕೊಳ್ಳಲಾರದಷ್ಟು ಮಹತ್ತಾದ ಕಾರ್ಯದ ದಾಖಲೆಯು ನನ್ನದು. ಅತಿ ಸುಲಭ; ಅತ್ಯಧಿಕ ಫಲ. ಕೇಳಲಿಚ್ಛಿಸುವಿರಾ?"

"ಅಹುದು—ಅಹುದು!!!"

"ಸ್ಪೆಸಿಫಿಕ್—ಎಂದು ದಿವ್ಯ ಗುಣವಾಚಕವಿರುವ ಔಷಧವೊಂದನ್ನು ತಯಾರಿಸಿ, ಬಾಟಲಿಗಳಲ್ಲಿ ತುಂಬಿ, ಜ್ವರಗಳಿಗೆ ರಾಮಬಾಣವೆಂದು ಪ್ರಪಂಚಕ್ಕೆ ದಾನಮಾಡಿದ್ದೇನೆ. ಇದನ್ನು ಕುಡಿದವರಿಗೆ ನಿಜವಾಗಿಯೂ ಸ್ಪೆಸಿಫಿಕ್ ಇದು! ನನ್ನ ಅಥವಾ ನಿಮ್ಮ ಆವಶ್ಯಕತೆ ಇಲ್ಲದೆ, ಇದನ್ನು ಕುಡಿದವರೆಲ್ಲ ಸಾಯುವರು!"

ವೈದ್ಯಸಭೆಯಲ್ಲಿ ಮತ್ತೊಮ್ಮೆ ಘೋಷವೆದ್ದಿತು. ಕರತಾಡನದಿಂದ ಕಿವಿಗಳು ಕಿವುಡಾದುವು. ಸಂತೋಷಾತಿರೇಕದಿಂದ ವೈದ್ಯರು, ಕೈಗೆ ಸಿಕ್ಕಿದುದನ್ನೆಲ್ಲ ಬಡಿದು ಬಡಿದು ಶಬ್ದವನ್ನು ಹೆಚ್ಚಿಸಿದರು. ಅಷ್ಟರಲ್ಲಿ—

ಒಂದೊಂದೇ ಕಂಠವು ಬಿಗಿಯಹತ್ತಿತು. ಉಸಿರು ಕಷ್ಟವಾಗಹತ್ತಿತು.

ಕಣ್ಣಾಲಿಗಳು ತಿರುಗಿದುವು. ಸಂತೋಷಾತಿರೇಕದಿಂದ ಹೃದಯದ ಕ್ರಿಯೆಯೂ ಹೆಚ್ಚಿ ಉಂಟಾದ ವಿಕಾರವಾಗಿರಬಹುದೇ ಎಂದು ಒಮ್ಮೆಗೆ ಅವರೆಲ್ಲ ಆಶ್ಚರ್ಯಪಟ್ಟರು. ಆದರೆ, ಅಂತಹದೇನೂ ಇರಲಿಲ್ಲ. ಶುದ್ಧಗಾಳಿಯ ಅಭಾವದಿಂದಲೇ ಈ ಸಂಕಟವಾಗ ಹತ್ತಿದೆಯೆಂದು ತಿಳಿದುಬಂತು. ಇನ್ನಲ್ಲಿ ನಿಂತರೆ ಪ್ರಾಣಗಳು ಹಾರಿಹೋಗಬಹುದೆಂದು ಹೆದರಿ, ಎಲ್ಲರೂ ಗವಿಯ ಬಾಗಿಲಿಗೆ ಓಡಿಬಂದರು. ಆದರೆ—

—ಗವಿಯ ಬಾಗಿಲು ಮುಚ್ಚಲ್ಪಟ್ಟು, ಸಿಮೆಂಟಿನಿಂದ ಬಿರುಕುಗಳೂ ತುಂಬಲ್ಪಟ್ಟಿದ್ದುವು!

ಊರ ಜನರು, ವೈದ್ಯಸಭೆಯ ರಹಸ್ಯವನ್ನು ಹೇಗೋ ತಿಳಿದು, ಆ ಗವಿಯ ಬಳಿಗೆ ಬಂದು, ವೈದ್ಯರ ಭಾಷಣಗಳನ್ನು ಕೇಳಿ, ಹೆದರಿ, ಆ ಗವಿಯನ್ನು ಮುಚ್ಚಿದ್ದರು!

ಅಂದಿನಿಂದ ಆ ಜಿಲ್ಲೆಯಲ್ಲಿ ವೈದ್ಯರ ಹೆಸರನ್ನು ಕೇಳಿದವರಿಲ್ಲ; ರೋಗಗಳಿಲ್ಲ; ಯಾರೂ ಸತ್ತುದೇ ಇಲ್ಲ!

"ವೈದ್ಯರು ಇಬ್ಬರನ್ನು ಕೊಲ್ಲುವುದಕ್ಕಾಗಿಯೇ ಒಬ್ಬನನ್ನು ಉಳಿಸುವರೆ"ಂದು ನನ್ನ ಗೆಳೆಯನೊಬ್ಬನು ಒಂದು ದಿನ, ಅದೊಂದು ಸಂದರ್ಭದಲ್ಲಿ ಒಂದು ಚತುರುಕ್ತಿಯನ್ನಾಡಲು,—"ಔಷಧಿಯೆಂಬುದು ರೋಗಿಯ ಕೊಲೆಗಾಗಿಯೇ ಇದೆ" ಎಂದು ಹಿಂದೊಮ್ಮೆ ಮತ್ತೊರ್ವ ಸ್ನೇಹಿತನು ಹೇಳಿದ್ದ ನೆನಪೂ ಉಂಟಾಗಿ, ಇವೆರಡು ಅಭಿಪ್ರಾಯಗಳ ನೆನಹಿನಿಂದ ಥಕ್ಕನೆ ಈ ಕತೆಯ ಕಲ್ಪನೆಯಾಯಿತು. ತಪ್ಪು ಅಭಿಪ್ರಾಯಗಳ ಮೇಲೆ ವ್ಯಂಗಟೀಕೆಯ ಯತ್ನವಿದೆಂದು ತಿಳಿದು, ಕತೆಯನ್ನು ಈ ಬಗೆಯಾಗಿ ರೂಪಿಸಿದ್ದೇನೆ. ಕತೆಗಾರನ ನಿಜ ಉದ್ದೇಶವನ್ನರಿತು, ಯಾರೂ ಈ ಕತೆಯಿಂದ ಮನಸ್ಸನ್ನು ನೋಯಿಸಿಕೊಳ್ಳಲಾರರೆಂದು ನಂಬುಗೆ.



# ೮. ಕೆಲವು ಐತಿಹಾಸಿಕ ಭಾಷಣಗಳು

ಇನ್ನಿಲ್ಲ;—ಅಂತಹ ಸಭೆ ಹಿಂದಿಲ್ಲ, ಮುಂದಿಲ್ಲ.

ಅದು ಭಾರತವರ್ಷದ ಚರಿತ್ರದಲ್ಲಿ ಸ್ವರ್ಣಾಕ್ಷರಗಳಿಂದ ಕೆತ್ತಲ್ಪಟ್ಟಿದೆ; ಶಿಲೆ ಮಾತ್ರ ಇದ್ದಲ್ಲಿ, ಶಿಲೆಯ ಮೇಲೆ; ತಾಮ್ರ ಮಾತ್ರ ಇದ್ದಲ್ಲಿ, ತಾಮ್ರದ ಮೇಲೆ; ಮರವಿದ್ದಲ್ಲಿ ಮರದ ಮೇಲೆ—ಕೆತ್ತಲ್ಪಟ್ಟಿದೆ.

ಮಹತ್ವದ ದಿನ,—ಷಣ್ಮುಗಂ ಕಂಪೆನಿಯು ಕ್ಯಾಟಲಾಗನ್ನು ಪ್ರಕಟಿಸುವ ಆ ದಿನ!

ಷಣ್ಮುಗಂರವರು ಪ್ರಖ್ಯಾತ ಪುರುಷರು. ಅವರಿಗೆ ನಾಲ್ಕು ನಾಲಿಗೆ,

ನಾಲ್ಕು ಮನಸ್ಸುಗಳು, ನಾಲ್ಕು ಆಸ್ತಿಗಳು,— ಎಲ್ಲವೂ ನಾಲ್ಕು.

ಆ ಊರಿನಲ್ಲಿ ಹಿಂದೆ ಕ್ಯಾಟಲಾಗ್ ಎಂಬುದೇ ಇರಲಿಲ್ಲ. ಇದುವೇ ಹೊಸತು.

ಪ್ರಕಟಣಾ ದಿನ, ಊರ—ಪರ ಊರ ಆಢ್ಯ ಗೃಹಸ್ಥರೆಲ್ಲ ಆಮಂತ್ರಿಸಲ್ಪಟ್ಟಿದ್ದರು. ಮದುರೆಯ ಗೋಪನ್ನವರು, ತ್ರಿಚಿನಾಪಳ್ಳಿಯ ಶಂಖನಾದಂರವರು, ವೇಲೂರಿನ ಕಟುಕ ಕಾಡಯ್ಯನವರು, ಬೊಂಬಾಯಿಯ 'ಸಮ್ಮರ್ಸೊಂಗ್' ಪತ್ರಿಕಾ ಸಂಪಾದಕರು, ಬಳ್ಳಾರಿಯ ಪಂಡಿತ ಬ್ರಹ್ಮಬಂಧುಗಳವರು, . . . . ಇನ್ನೂ ನೂರಾರು ಮಹನೀಯರು—ಎಲ್ಲರೂ ಬಂದು ಉಪಸ್ಥಿತರಾಗಿದ್ದರು.

ಮಾಜೀ ಸರಕಾರೀ ಕಂಟ್ರಾಕ್ಟರ್ ಲಕ್ಷ್ಮೀಕಾಂತರೇ ಈ ಸಭೆಗೆ ಅಧ್ಯಕ್ಷರು. ಇವರು ಈಗ ಕೆಲಸದಿಂದ ನಿವೃತ್ತಿ ಹೊಂದಿ ಎಪ್ಪತ್ತನೆಯ ವರ್ಷದ 'ವಾನಪ್ರಸ್ಥಪ್ರಾಯ'ದಲ್ಲಿದ್ದರೂ, ಹದಿನೇಳರ ತರುಣರಂತೆ ಉತ್ಸಾಹವುಳ್ಳವರಾಗಿದ್ದು,— ಪಯಸ್ವಿನೀ, ನಂದಿನೀ, ಶಂಖಿನೀ, ಕಾಮಿನೀ, ಮಾಲಿನೀ, ಶಾಲಿನೀ, ಸೇವಂತಿನೀ ಮೊದಲಾದ ಕಡವುಗಳನ್ನು ಕಂಟ್ರಾಕ್ಟಿಗೆ ವಹಿಸಿಕೊಂಡು ವರ್ಷ ವರ್ಷವೂ ಸಾವಿರಾರು ರೂಪಾಯಿಗಳನ್ನು ತಮ್ಮ ಪೂರ್ವಾರ್ಜಿತದಿಂದ ಸರಕಾರಕ್ಕೆ ನಷ್ಟ ತುಂಬಿಸಿ ಕೊಟ್ಟು,— ಆ ನದಿಗಳ ನೀರಿಗೆಲ್ಲ ತಾನೇ ಸ್ವಾಮಿಯೆಂದು ತನ್ನ ಮುದುಕಿ ಹೆಂಡತಿಗೂ ತರುಣ ಮಗನಿಗೂ ಆಗಾಗ್ಗೆ ಸಮಾಧಾನ ಹೇಳುವ ಶಾಂತಸ್ವಭಾವಿಗಳಾಗಿದ್ದರು. ಗೀತೆಯಲ್ಲಿ ನುಡಿದಂತೆ ನಡೆವ ಮಹಾತ್ಮರಿವರೆಂದೂ, ಇವರ ಅನ್ನ ಉಂಡು ಮರೆಯದವರ ಹೇಳಿಕೆ. ಒತ್ತಾಯ ಪಡಿಸಿದರೆ ಲಕ್ಷ್ಮೀಕಾಂತರು ಇದನ್ನೊಪ್ಪುತಿದ್ದರು. ಮಹಾ ಸಮಾರಂಭಕ್ಕೆ ಮಹಾತ್ಮರೇ ಯೋಗ್ಯರೆಂದು ಷಣ್ಮುಗಂರವರು ಊರಿನವರಿಗೆಲ್ಲ ಹೇಳಿ, ಇವರನ್ನು ಆರಿಸಿದ್ದರು.

ಷಣ್ಮುಗಂರವರ ಹೆಸರಲ್ಲಿ ಪ್ರಕಟವಾಗುವ ಆ ಕ್ಯಾಟಲಾಗಿನ ಸಂಗ್ರಹ ಕಾರ್ಯವನ್ನು ಮಾಡಿದ ಮೃದಂಗಂರವರು ಅಂದು ಕಾಶ್ಮೀರ್ ಅಂಗಿಯನ್ನು ಹಾಕಿ, ಬಂಗಾಲೀ ಪೇಟಾವನ್ನು ತಲೆಗಿಟ್ಟು, ಪಾಪಾಸುಗಳನ್ನು ಕಾಲಿಗೆ ಹಾಕಿ (ಜಾರಿ ಬೀಳದಂತೆ ಕಟ್ಟಿ) ಒಳಗಿನ ಶರ್ಟು ಹರಿದಿದೆಯೆಂದು ಅಂಗಿಯ ಗುಂಡಿಗಳೆಲ್ಲವನ್ನೂ ಹಾಕಿ—ಗುಂಡಿಗಳಿಲ್ಲದಲ್ಲಿ ಬಾಳೆಯ ಹಗ್ಗದಿಂದ ಕಟ್ಟಿ, ನಯವಾಗಿ ಮುಖಕ್ಷೌರಮಾಡಿಕೊಂಡು ಸಂತೋಷದಿಂದ ಏನನ್ನೂ ತಿನ್ನಲಾರದೆ ವೀಳಯವನ್ನು ಮಾತ್ರ ಜಗಿದು, ಸಿಗರೇಟನ್ನು ತನ್ನ ಬಾಯಿಯಲ್ಲಿಟ್ಟು ಇತರರ ಸಿಗರೇಟುಗಳಿಗೆ ಬೆಂಕಿ ಹಚ್ಚುತ್ತ ಹೋಗುತಿದ್ದಾಗ,—'ಬಂತು ಬಂತು!' ಎಂಬ ಕೂಗು ಎದ್ದಿತು.

ಕಾಫಿ ಬರುತಿತ್ತು!

ರಸ್ತೆಗಳಿಗೆ ನೀರು ಹಾಕಿಸುವ ಮೋಟಾರು ಲೋರಿಗಳು ಮೂರು, ಅಲ್ಲಿಗೆ ಬಂದುವು. ಡ್ರೈವರರ ಹಣೆಯಿಂದ, ಹಿಂದಿನ ಗುಡಾಣದಲ್ಲಿನ

ಕಾಫಿಯ ಸೆಳೆಯಿಂದ, ಬೆವರಿಳಿಯು ತಿತ್ತು. ಆ ಮೂರು ಲೋರಿಗಳಲ್ಲೂ ಕಾಫಿ!

ಆ ಮೂರು ಲೋರಿಗಳ ಹಿಂದೆ ಐದು ದೊಡ್ಡ ಲೋರಿಗಳು. ಅವುಗಳಲ್ಲಿ ತುಂಬ ತಿಂಡಿ!

ಅದರ ಹಿಂದೆ ಒಂದು ಚಿಕ್ಕ ಸೈನ್ಯ; ಕಾಫಿಕೊಡುವ ಸೇವಕರ ದಂಡು!

ಲೋರಿಗಳ ಕೆಳಗೆ ಸಾಲಾಗಿ ಕಪ್ಪುಗಳನ್ನಿಟ್ಟರು; ಕಾಫಿ ಸುರ್ರೆಂದು ಸುರಿಯಿತು; ತಿಂಡಿಯ ತಟ್ಟೆಗಳು ಕೆಳಗೆ ಬಂದುವು; ಸೇವಕರ ದಂಡು, ಮಹಾಘೋಷ ಮಾಡತೊಡಗಿತು; ಸಭಿಕರೆಲ್ಲ ಕಣ್ಣುಮುಚ್ಚಿ, ಬಾಯಿ ತೆರೆದರು; ಅಧ್ಯಕ್ಷರು, ತಾವು ಕಾಫಿ ಕುಡಿಯಲೊಲ್ಲೆವೆಂದು ಹೇಳಿದರು; ಸಭಿಕರೂ, ಸೇವಕರೂ, ಲೋರಿ ಡ್ರೈವರರೂ ಒತ್ತಾಯ ಮಾಡಿದ ಮೇಲೆ, ಮೂರು ಪ್ಲೇಟು ತಿಂಡಿ ತಿಂದು ಅಷ್ಟೇ ಲೋಟಾ ಕಾಫಿ ಕುಡಿದ., ಧಾರಾಳವಾಯಿತೆಂದರು; ಕಾಫಿ ಮುಗಿಯಿತು; ತಿಂಡಿ ಮುಗಿದು, ಎಪ್ಪತ್ತು ಪ್ಲೇಟುಗಳು ಚೂರಾದುವು; ಡ್ರೈವರರಿಗೆ ಕಾಫಿ ಮಾತ್ರ ಉಳಿಯಿತೆಂದು ಅವರು ಹೊಟೇಲು ಸೇವಕರೊಡನೆ ಜಗಳಾಡಿದ ಮೇಲೆ ಅಧ್ಯಕ್ಷ ಮಹಾಶಯರು ಭಗವದ್ಗೀತೆಯಿಂದ ಒಂದು ಶ್ಲೋಕವನ್ನೆತ್ತಿ ಹೇಳಲು, ಅಂದಿನ ಕಾಫಿ ಸಮಾರಂಭ ಮುಗಿದು, ಸಭಾರಂಭವಾಯಿತು.

ಕ್ಯಾಟಲಾಗ್ ಸಂಗ್ರಹಕಾರರಾದ ಮೃದಂಗಂರವರೇ ಸ್ವಾಗತಾಧ್ಯಕ್ಷರು. ಅವರು ಭಾಷಣ ಪೀಠಕ್ಕೆ ಬರುತ್ತಲೇ ಕರತಾಡನವಾಗಲು, ಆ ಶಬ್ದಕ್ಕೆ ದಿಗಿಲುಗೊಂಡು, ತಮ್ಮ ಮುಂಡಾಸಿನ ಬದಲಾಗಿ ಸುಳ್ಳು ಮೀಸೆಗಳನ್ನು ತೆಗೆದು ಮೇಜಿನ ಮೇಲಿಟ್ಟು, ಅನಂತರ ಅವುಗಳನ್ನು ತೆಗೆದು ಪುನಃ ತುಟಿಗೆ ಹಚ್ಚಿ, ಮುಂಡಾಸನ್ನು ತೆಗೆದಿಟ್ಟು, "ಸಭಿಕರೇ! . . . ." ಎಂದರು. ಕರತಾಡನವು ಎಡೆಬಿಡದೆ ನಡೆಯಿತು. ಮೃದಂಗಂರವರು ಭಾಷಣ ಮಾಡಿದರೋ ಇಲ್ಲವೋ ಯಾರಿಗೂ ಕೇಳಿಸಲಿಲ್ಲ. ಕರತಾಡನ ಮುಗಿದ ಕ್ಷಣದಲ್ಲೇ—" . . . . ಎಂದು ನನ್ನ ವಿನಂತಿ!" ಎಂದು ಮೃದಂಗಂರವರು ಹೇಳಿದುದು ಕೇಳಿಸಿದೆ.

ತ್ರಿಚಿನಾಪಳ್ಳಿಯ ಶಂಖನಾದಂರವರು ದ್ವಿತೀಯ ಭಾಷಣಗಾರರು. ಇವರು ಒಳ್ಳೆಯ ವಾಗ್ಮಿಗಳು. ಆದರೆ, ೧೯೦೫ರಲ್ಲಿ ಬಂದ ಮಾರಿಕೋಪದ್ರವದಲ್ಲಿ ಇವರ ನಾಲಿಗೆ ಮೇಲಿಂದಲೇ ಅಮ್ಮನು ಹಾರಿಹೋದಳೆಂದೂ, ಅಂದಿನಿಂದಿವರು ಒಳನಾಲಿಗೆಯಿಂದ ಮಾತ್ರ ಮಾತಾಡುತ್ತಿರುವರೆಂದೂ ಜನರಾಡಿಕೊಳ್ಳುತ್ತಾರೆ. ನಿಜವಿರಬೇಕು. ಟಕಾರಕ್ಕೂ ಸಕಾರಕ್ಕೂ ಇವರು ತಕಾರವನ್ನೆ ಉಚ್ಚರಿಸಿ, ಷಣ್ಮುಗಂರವರನ್ನು ಆಪಾದಮಸ್ತಕ ಹೊಗಳಿ, ಇನ್ನು ತಾನು ಬದುಕಿ ಉಳಿದರೆ, ಆಗಾಗ್ಗೆ ಹೊಗಳುವೆನೆಂದು ಭರವಸೆ ಇತ್ತರು.

ಬೊಂಬಾಯಿಯ "ಸಮ್ಮರ್ಸ್ಸೊಂಗ್" ಪತ್ರಿಕಾ ಸಂಪಾದಕರನ್ನು ಮೃದಂಗಂರವರು ಒತ್ತಾಯದಿಂದ ಭಾಷಣ ಪೀಠಕ್ಕೆ ಹೊತ್ತು ತಂದುದರಿಂದಲೇ ಅವರು

ಭಾಷಣಮಾಡಿದರೆಂದು,— ಭಾಷಣದ ನಂತರ ಜ್ವರಬಂದು ಹಾಸಿಗೆ ಮೇಲೆ ಹೊರಳಾಡುತ್ತಿದ್ದಾಗ "ಡೆಲಿರಿಯಂ"ನಲ್ಲಿ ತಿಳಿದುಬಂದಿದೆ. ಇವರು ಮುಕ್ಕಾಲು ಘಂಟೆ ಮೂಕನಂತೆ ಸಭೆಯನ್ನು ದಿಟ್ಟಿಸಿ, "ಪ್ರಿಯರೇ" ಎಂದು ಯಾರನ್ನೊ ಕರೆದು ಪುನಃ ಮುಕ್ಕಾಲು ತಾಸು ಕಣ್ಣುಗಳ ನ್ನಾಡಿಸಿ,—"ನಾನೀ ಕೆಟಲಾಗನ್ನು ಅಭಿನಂದಿಸುತ್ತೇನೆ!" ಎಂದು ಸಜೀವಮಾನವರನ್ನು ಮರೆತು ಆ ಕೆಟಲಾಗನ್ನು ಮಾತ್ರ ಅಭಿನಂದಿಸಿ, ದೊಪ್ಪನೆ ಬಿದ್ದುಬಿಟ್ಟರೆಂದು, ಪೃದಂಗಂರವರು ಪ್ರಮಾಣ ಮಾಡಿ, ಕೋರ್ಟಿನಲ್ಲಿ ಹೇಳಿರುತ್ತಾರೆ.

ವೇಲೂರಿನ ಕಾಡಯ್ಯನವರು ಕಟುಕರಾದರೂ ಕೆಟಲಾಗಿನ ಮಟ್ಟಿಗೆ ಕರುಣೆಯನ್ನು ತೋರಿದರು. " ಈ ಕೆಟಲಾಗು ನಮಗೆ ಅವಶ್ಯಕ. ಈ ಕೆಟಲಾಗಿನ ಪ್ರಕಾಶಕರನ್ನೂ ವಾಚಕರನ್ನೂ ನಾನು ಅನುಮೋದಿಸುತ್ತೇನೆ. ರಮಣ್ಣಾರವರು ಹೇಳಿದಂತೆ (ಇವರು ಹಿಂದೂ ಹೆಸರುಗಳನ್ನೆಲ್ಲ ಇದೇ ಬಗೆಯಾಗಿ—"ರಾಮಣ್ಣ"ನನ್ನು "ರಮಣ್ಣಾ" ಎಂದು ಉಚ್ಚರಿಸುವರು.) ಇದು ಕ್ಯಾಟಲಾಗ್ ಮಾತ್ರವಲ್ಲ—ಒಂದು ಮಹಾ ಗ್ರಂಥವೂ ಅಹುದು. ಈಗ ನೋಡಿ,—ನಮ್ಮ ವ್ಯಾಪಾರವೆಲ್ಲ ಹಾಳಾಗಿದೆ. ಮಾಂಸಕ್ಕೆ ಬೆಲೆ ಕಡಿಮೆ; ಕುರಿಗಳಿಗೆ . . ."

ಐದನೆಯ ಭಾಷಣಗಾರರಾಗಿ ಮದುರೆಯ ಗೋಪನ್‌ರವರು ಬಂದರು. ಇವರು ತೋರಿಕೆಗೆ ರಾಜಭಕ್ತರಾದರೂ ನಿಜವಾಗಿ ಅಪ್ರತಿಮ ದೇಶಭಕ್ತರೆಂದು ದೇಶದವರು ಅರಿತಿರಲಿಲ್ಲ; ಇವರೇ ಅರಿತಿದ್ದರು. ಇವರು ಬಂದವರೇ ಗದ್ಗದ ಕಂಠರಾಗಿ, "ನನಗೆ ಸ್ವರವೇ ಬಾರದು—ಕ್ಯಾಟಲಾಗ್ ಅಷ್ಟು ಉತ್ತಮ!" ಎನ್ನುತ್ತಲೇ, "ಎಕ್ಸಲೆಂಟ್, ಸ್ಪ್ಲೆಂಡಿಡ್" ಎಂದು ಉದ್ಗಾರಗಳು ಹೊರಟುದನ್ನು ಕೇಳಿ—"ಅಬಿಸೀನಿಯಾ—ಬ್ರೆಝಿಲ್ – ಮಲಯಾ ಮೊದಲಾದ ಕಡೆಗಳಲ್ಲೆಲ್ಲಿಯೂ ಇಂತಹ ಕೆಟಲಾಗು ಇಲ್ಲವೆನಿಸಬೇಕು" ಎಂದು ಹೇಳಿ, ತಟ್ಟನೆ, ಮೌನವಾದರು.

ಬಳ್ಳಾರಿಯ ಪಂಡಿತ ಬ್ರಹ್ಮಬಂಧುಗಳು ಇವರನ್ನನುಸರಿಸಿ ಬಂದರು. ಉಜ್ವಲ ಭಾಷಣವೆಂದರೆ ಇವರದೇ. ಸರಕಾರವು ನಮ್ಮನ್ನು ಕೊಲ್ಲುತ್ತಿದೆ! ಎಂದೇ ಇವರ ಭಾಷಣಾರಂಭ; "ಆದರೆ, ನಾವು ಸಾಯುವುದಿಲ್ಲ" ಎರಡನೆ ವಾಕ್ಯ; "ಕ್ಯಾಟಲಾಗನ್ನು ಪ್ರಕಟಿಸುವಾಗಲೂ ಸರಕಾರವು ನಿರ್ಬಂಧ ಹಾಕುವುದಾದರೆ—ಗದ್ದೆಯಲ್ಲಿ ಬೆಳೆದ ಗೋದಿಯನ್ನು ರೊಟ್ಟಿ ಮಾಡದೆ ಹಾಗೆಯೇ ತಿನ್ನಬೇಕೆಂದು ಹೇಳುವಷ್ಟು ಕಠಿನ . . ." ಇದು ಮೂರನೆ ವಾಕ್ಯ–ಎನ್ನುವಾಗಲೇ ಅವರ ಕಣ್ಣಿನಲ್ಲಿ ಕೆಂಪಗಿನ ಮಂಡಲಗಳಿದ್ದಂತಾಯಿತು. "ಪೋಲೀಸರು—ಕೆಂಪು ಪಕಡಿಯವರು –" ಎಂದು ಅಧ್ಯಕ್ಷರು ಹಿಂದಿನಿಂದ ಪಿಸುಮಾತಿನಲ್ಲಿ ಹೇಳಿದರಂತೆ. ಆ ಮೇಲೆ ಬ್ರಹ್ಮಬಂಧುಗಳವರಿಗೆ, ತಮ್ಮ ಕಣ್ಣಿನ ಕೆಂಪು ಮಂಡಲಗಳ ಗುಟ್ಟು ತಿಳಿದು ಬಂತು. "ರಾಜದ್ರೋಹಕ್ಕಾಗಿ ಎರೆಸ್ಟ್" ಎಂದು ಹೇಳುವುದರೊಳಗೆ, ಬ್ರಹ್ಮಬಂಧುಗಳವರು

ತಾವಾಗಿ ಎರೆಸ್ಟಿಗೆ ಕೈಗಳನ್ನೊಪ್ಪಿಸಿ,—"ದೇಶಕ್ಕಾಗಿ, ಭಾಷೆಗಾಗಿ, ಸತ್ಯಕ್ಕಾಗಿ-ನಾನು ಜೈಲಿಗೆ ಹೋದೆನೆಂದು ಅಚ್ಚು ಹಾಕಿಸಿ ಕೆಟಲಾಗಿಗೆ ಅನುಬಂಧವನ್ನು ಹಚ್ಚಿಸಿರಿ" ಎಂದು ಷಣ್ಮುಗಂರವರಿಗೆ ಸೂಚನೆಕೊಟ್ಟು—"ಜೈ, ಕರ್ಣಾಟಕ ಕೆಟಲಾಗಿಗೆ ಜೈ!" ಎಂದು ತಾವೊಬ್ಬರೇ ಉದ್ಘೋಷಿಸಿ-ಪೋಲೀಸರ ಭಯದಿಂದ ಉಸಿರಾಡಿಸದೆ ಕುಳಿತ ನರಶವಗಳ ನಡು ವಿನಿಂದ "ಲಾಕ್ ಆಪ್"ಗೆ ನಡೆದು ಹೋದರು.

"ಹರಿ ಹರಿ" ಎನ್ನುತ್ತ ಅಧ್ಯಕ್ಷರು ಕಣ್ಮುಚ್ಚಿ ಭಾಷಣಕ್ಕಾರಂಭಿಸಿದರು. ಅವರ ಭಾಷಣದಲ್ಲಿ "ಉದಾಹರಣಾರ್ಥ"ವಾಗಿಯೂ "ಉಪಕಥಾರೂಪ" ವಾಗಿಯೂ (೧) ಗರುಡ ಪುರಾಣದಿಂದ ಮೂರು ಅಧ್ಯಾಯ (೨) ಮಹಾಭಾರತ ದಿಂದ ಎರಡು ಪರ್ವ (೩) ರಾಮಾಯಣದಿಂದ ಐದು ಖಂಡ (೪) ಗೀತೆಯಿಂದ ನಾಲ್ಕು ಅಧ್ಯಾಯ—ಭಕ್ತಿ ವಿಜಯದಿಂದ ಏಳು ಕಥೆಗಳು-ಇವಿಷ್ಟು ವಿವರಿಸಲ್ಪಟ್ಟಿವೆಯೆಂದು, ಅವರೇ ಪೋಲೀಸರ ಭಯದಿಂದ ತಮ್ಮ ಬಂಗಲೆಗೆ ಓಡಿಹೋದ ಷಣ್ಮುಗಂರವರನ್ನು ಹುಡುಕಿ ತೆಗೆದು ಹೇಳಿರುವರು. ಅಧ್ಯಕ್ಷ ಮಹಾಶಯರು ತಮ್ಮ ಭಾಷಣವನ್ನು ಮುಗಿಸಿ ಕಣ್ತೆರೆವಾಗ, ಸೇವಕನು ಸಭಿಕರಿಗಾಗಿ ಇರಿಸಿದ ಎಲ್ಲ ಕುರ್ಚಿಗಳನ್ನೂ ತೆಗೆದು, ಇವರೊಬ್ಬರ ಕುರ್ಚಿಗಾಗಿ ಕಾದುನಿಂತಿದ್ದನು.

ಆಶ್ಚರ್ಯಾನ್ವಿತರಾಗಿ ಅಧ್ಯಕ್ಷ ಮಹಾಶಯರು,-"ಎಲ್ಲಿ-ಜನರೆಲ್ಲ ಎಲ್ಲಿ?" ಎಂದು ಕೇಳಿದರು.

"ಕೆಲವರು ಆತ್ಮಹತ್ಯ ಮಾಡಿಕೊಂಡರು; ಕೆಲವರು ಸ್ವೇಚ್ಛೆಯಿಂದ ಪ್ರಾಣತ್ಯಾಗಮಾಡಿದರು; ಕೆಲವರು ತಮ್ಮ ಶರೀರಗಳನ್ನು ಡಾಕ್ಟರರ ವಶಕ್ಕೊಪ್ಪಿಸಿದರು; ಉಳಿದವರು . . . ನಾನೊಬ್ಬನೇ!" ಎಂದು ಸೇವಕನು ಉತ್ತರ ಹೇಳಿದನು.

ಅಧ್ಯಕ್ಷ ಮಹಾಶಯರು ಪಿಟ್ಟೆಂದು ಮಾತಾಡದೆ, ಪೀಠದಿಂದ ಕೆಳಗಿಳಿದು, ನಶ್ಯವನ್ನು ಸೇದಿ, ಉಳಿದುದನ್ನು ಪ್ರಮಾದವಶಾತ್ ಸೇವಕನ ಕಣ್ಣಿಗೆರಚಿ, ಷಣ್ಮುಗಂರವರ ಬಂಗಲೆಗೆ ಹೋಗಿ ಅವರನ್ನು ಹುಡುಕಿ ತೆಗೆದು, ಅವರಿಗೆ ತಮ್ಮ ಭಾಷಣವನ್ನು ಸವಿಸ್ತಾರವಾಗಿ ಹೇಳಿ ಪಯಸ್ವಿನೀ—ನಂದಿನೀ — ಶಂಖಿನೀ — ಕಾಮಿನೀ — ಮಾಲಿನೀ— ಶಾಲಿನೀ — ಸೇವಂತಿನೀ ಸೇವೆಗಾಗಿ ಹೊರಟು ಹೋದರೆಂದು, ಭಾರತ ವರ್ಷದ ಚರಿತ್ರದಲ್ಲಿನ ಸ್ವರ್ಣಾಕ್ಷರಗಳೂ, ಶಿಲಾಶಾಸನಗಳೂ, ಮರದ ತೊಗಟೆಗಳೂ ನಮಗೆ ತಿಳಿಸುತ್ತಿವೆ.



ಮಂಗಳೂರು ಪ್ರೆಸ್, ರಥಬೀದಿ, ಮಂಗಳೂರು.